ರವೀಂದ್ರನಾಥ ಠಾಕೂರರ
ಕೃತಿಯನ್ನಾಧರಿಸಿದ
**ಮಕ್ಕಳ ನಾಟಕ**

# ಅಂಚೆಮನೆ

ಅಳವಡಿಕೆ :

ಕೆ ವಿ ಸುಬ್ಬಣ್ಣ

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ

ANCHEMANE—(Kannada) Children's play based on Rabindranath Tagore's POST-OFFICE by K. V. Subbanna
Printed at Sagara Mudrana, Sagar and Published by
Akshara Prakashana, Sagar, Karnataka, 577401
First Impression : Sept. 1974 ; Copies : 1000
Pages : 42, Price : Rs. Two



ಬೆಲೆ : **ಎರಡು ರೂಪಾಯಿ**

## ಅರಿಕೆ

ರವೀಂದ್ರನಾಥ ಠಾಕೂರರ 'ಅಂಚೆಮನೆ' ನಾಟಕದ ಅನುವಾದಗಳು ಕನ್ನಡದಲ್ಲಿ ಈಗಾಗಲೇ ಎರಡು ಬಂದಿವೆ. ಆದರೆ ನನ್ನದು ಅನುವಾದವಲ್ಲ ; ಅದರ ಆಧಾರದ ಮೇಲೆ ಮಾಡಿಕೊಂಡ 'ಪ್ರಯೋಗ ಪಾಠ'. ಮೂಲಕ್ಕೂ ಇದಕ್ಕೂ ತುಂಬ ವ್ಯತ್ಯಾಸಗಳಿವೆ. ರಂಗದ ಮೇಲೆ ಹಲವು ಪರಿಕರಗಳ ಮಾಧ್ಯಮದಲ್ಲಿ (ಮೂಲವನ್ನೂ ಒಂದು ಪರಿಕರವನ್ನಾಗಿ ಬಳಸಿಕೊಂಡು) ಹೊಸ ಕೃತಿಯನ್ನು ರೂಪಿಸಬೇಕೆಂಬುದು ನನ್ನ ಉದ್ದೇಶವಾದ್ದರಿಂದ ಮೂಲ ಕೃತಿಯ ಬಂಧವನ್ನು ಶಿಥಿಲಗೊಳಿಸಿಕೊಂಡಿದ್ದೇನೆ. ಬೇರೆ ನಿರ್ದೇಶಕರು ತಮ್ಮ ತಮ್ಮ ಬೇರೆ ಬೇರೆ ರೀತಿಗಳಲ್ಲೇ ಪ್ರಯೋಗಿಸಬೇಕಾದ್ದರಿಂದ, ಸಡಿಲುಗೊಳಿಸಿದ ಈ ರಂಗ ಪಾಠ ಪ್ರಯೋಗಕ್ಕೆ ಉಪಯುಕ್ತವಾದೀತೆಂದು ನನ್ನ ಅನಿಸಿಕೆ. ಮತ್ತು ಆ ಕಾರಣದಿಂದಲೇ ನನ್ನ ಪ್ರಯೋಗದ ವಿವರಗಳನ್ನು ಕೊಡದೆ ಸ್ಥೂಲ ರಂಗಪಾಠವನ್ನಷ್ಟೆ ಕೊಟ್ಟದ್ದೇನೆ.

ಮಕ್ಕಳಿಗೆ·ಎಟುಕದೆ ಹೋಗಬಹುದಾದ 'ಸಾಂಕೇತಿಕತೆ' ಇದರಲ್ಲಿದ್ದರೂ ಅದನ್ನು ಬಿಟ್ಟು ಕೂಡ ಇದು ಮಕ್ಕಳಿಗೆ ರಂಜಕವಾಗಬಹುದು ಎಂದು, ಈಗಾಗಲೇ ನಾನು ಮಾಡಿನೋಡಿರುವ ಐದಾರು ಪ್ರಯೋಗಗಳ ಆಧಾರದ ಮೇಲೆ, ನಂಬಿಕೊಂಡಿದ್ದೇನೆ.

ಇದರ ಪ್ರಯೋಗದಲ್ಲಿ ದುಡಿದ ಮಕ್ಕಳಿಗೂ ಡಿ. ಸುಬ್ಬರಾವ್, ಪಿ. ನಾಗೇಶರಾವ್, ಎ. ಎಸ್. ನಾಗೇಶರಾವ್, ಸಿ. ಎನ್. ನರಹರಿ ಭಟ್ಟ ಮೊದಲಾದ ನೀನಾಸಮ್ ಮಿತ್ರರಿಗೂ ನಾನು ಋಣಿ.

೩–೯–೭೪

**ಕೆ. ವಿ. ಸುಬ್ಬಣ್ಣ**

# ಪಾತ್ರವರ್ಗ

[ಶ್ರೀ ನೀಲಕಂಠೇಶ್ವರ ನಾಟ್ಯ ಸೇವಾ ಸಂಘ (ರಿ) ಹೆಗ್ಗೋಡು ಶಿವರಾಮ ಕಾರಂತ ರಂಗಮಂದಿರದಲ್ಲಿ ಮೊದಲು (ತಾ. 26-11-72) ಪ್ರಯೋಗಿಸಿದಾಗ (ನಿರ್ದೇಶನ : ಕೆ. ವಿ. ಸುಬ್ಬಣ್ಣ) ಭಾಗವಹಿಸಿದವರ ಹೆಸರುಗಳೊಡನೆ]

| | | | |
|---|---|---|---|
| ಸುಧಾ | ಎಂ. ಬಿ. ರಾಜೇಶ್ವರಿ | ಪಹರೆಯವ | ಎಚ್. ಎಸ್. ಗೋಪಾಲ |
| ಮಾಧವದತ್ತ | ಎಂ. ಎಸ್. ದಿವಾಕರ | ಕೊಡೆ ಹುಡುಗ | ಎಂ. ಎಸ್. ಗೋಪಾಲ |
| ಅಮಲ | ಕೆ. ವಿ. ಅಕ್ಷರ | ರಾಜದೂತ | ಪಿ. ಎನ್. ರಾಜಶೇಖರ |
| ಮೊಸರಿನವ | ಎಂ. ಡಿ. ನಾರಾಯಣಮೂರ್ತಿ | ರಾಜವೈದ್ಯ | ಎ. ಎನ್. ಮೃತ್ಯುಂಜಯ |
| ತಾತ | ಎಚ್. ಪಿ. ಮಂಜಪ್ಪ | ಅಂಚೆಯಾಳು | ಪಿ. ನಾಗೇಶರಾವ್ |
| ಮುಖಂಡ | ಬಿ. ಎನ್. ಶಾಂತಾರಾಮ | ಛಿದಾಮ | ನಾಗೇಶರಾವ್ |
| ವೈದ್ಯ | ಕೆ. ಎಲ್ ಉಮೇಶ | ಗಣ್ಣ | ಕೆ. ವಿ. ನರಹರಿ |
| ಮಾಣಿ | ಕೆ. ಎಲ್. ಗಣೇಶ | ಆಳು | ಡಿ. ಸುಬ್ಬರಾವ್ |

**ಹುಡುಗರು :** ಕೆ. ಎಸ್. ತಿಮ್ಮಪ್ಪ, ಎಂ. ವಿ. ನರಹರಿ, ಎಂ. ಎಂ. ಕೃಷ್ಣಮೂರ್ತಿ, ಎಂ. ಬಿ ಸುರೇಶ, ಎಚ್.ಎಂ. ಅಜಿತ, ಎಂ.ಡಿ. ಕೇಶವಮೂರ್ತಿ, ಎಂ.ಎಲ್. ಶ್ರೀದರ.

**ಹುಡುಗಿಯರು :** ಎಂ.ಡಿ. ಇಂದುಮತಿ, ಎಂ.ಬಿ. ಅನುಪಮಾ, ವಿ. ಎಂ. ಸರೋಜ, ಎಂ. ಎಲ್. ಮಮತ.

**ನಕ್ಷತ್ರಕನ್ಯೆಯರು ಹೊಳೆ ಇ :** ಎ. ಆರ್. ಭಾಗೀರಥಿ, ಕೆ. ಎಂ. ಗಿರಿಜಾ, ಎಚ್. ಪಿ. ಭಾರತಿ, ಜಿ. ಕೆ. ಸೀತಾಲಕ್ಷ್ಮಿ, ಎ. ಎನ್. ಜಯಶ್ರೀ, ಎಲ್. ಎಸ್. ವಿನೋದ, ಜಿ. ನಾಗರತ್ನ, ಜಿ. ಎಸ್. ಭಾಗ್ಯಲಕ್ಷ್ಮಿ, ಎಚ್. ಎನ್. ಶ್ರೀಮತಿ, ಕೆ. ಜಿ. ಗೀತಾ, ಜಿ. ವಿ. ಮೀನಾಕ್ಷಿ, ಎಚ್. ಕೆ. ಜಯಲಕ್ಷ್ಮಿ, ಎಂ. ಗಾಯತ್ರಿ, ಕೆ. ಟಿ. ಲೀಲಾವತಿ, ಎಚ್. ಡಿ. ಭಾರತಿ, ಆರ್. ರಾಜಲಕ್ಷ್ಮಿ, ಎನ್. ಎಸ್. ಜಯಲಕ್ಷ್ಮಿ.

# ಅಂಚೆಮನೆ

[ದೃಶ್ಯ : ಮಾಧವದತ್ತನ ಮನೆಯ ಮುಂಭಾಗ. ಮನೆಯ ಬಲಭಾಗಕ್ಕಿರುವ ರಸ್ತೆ ಮನೆಯ ಹಿಂಭಾಗಕ್ಕೆ ತಿರುಗಿ ಮುಂದುವರಿದು ಹೋಗಿದೆ. ನಾಟಕ ಪ್ರಾರಂಭವಾಗುತ್ತಿದ್ದಂತೆ, ಹಳೇ ಕಾಲದ ಕಂಬಿ ಪಂಚೆ ಖಾಕಿ ಕೋಟು ಖಾಕಿ ರುಮಾಲು ಧರಿಸಿದ ಮತ್ತು ಕೈಯಲ್ಲಿ ಗೆಜ್ಜೆಯುಳ್ಳ ಭರ್ಜಿಕೋಲು ಹಿಡಿದ ಅಂಚೆಯಾಳು (ರನ್ನರ್) ಪ್ರವೇಶಿಸಿ, ಓಟದ ನಡಗೆಯಲ್ಲಿ ಇನ್ನೊಂದು ಕಡೆಗೆ ನಿಷ್ಕ್ರಮಿಸು ವನು. ಐದಾರು ಹುಡುಗರು ಅವನನ್ನು ಹಿಂಬಾಲಿಸಿ ಬಂದು ಆತ ನಿಷ್ಕ್ರಮಿಸಿದ್ದನ್ನು ಕಂಡು ನಿಲ್ಲುತ್ತಾರೆ.]

ಹುಡುಗ ೧ : ಹೋಗಿಬಿಟ್ಟನಾ ?

ಹುಡುಗ ೨ : ಹೋಗಿಬಿಟ್ಟ.

ಹುಡುಗ ೩ : ಯಾರು ಅವನು ?

ಹುಡುಗ ೪ : ಗೊತ್ತಿಲ್ವಾ ? ಅವನು ಅಂಚೆ ಮನುಷ್ಯ. ಊರೂರಿಗೆ ಮನೆಮನೆಗೆ ಕಾಗದ ಹಂಚ್ತಾ ಹೋಗ್ತಾನೆ.

ಹುಡುಗ ೧ : ಅಲ್ಲಿ ಆ ದೊಡ್ಡ ಕೆಂಪು ಮನೆ ಕಟ್ಟಿಲ್ವೇನೋ ಹೊಸದಾಗಿ ?— ಮೇಲೆ ಒಂದು ಎತ್ತರದ ಬಾವುಟ ಹಾಕಿದಾರಲ್ಲ............

ಹುಡುಗ ೩ : ಅಂಚೆಮನೆ ಅಂತಾರಲ್ಲ..........

ಹುಡುಗ ೨ : ಹುಂ. ಅದೇ ಅಂಚೆಮನೆ. ರಾಜ ಹೊಸದಾಗಿ ಕಟ್ಟಿಸಿದಾನೆ.

ಹುಡುಗ ೩ : ಓ, ಎಷ್ಟು ದೊಡ್ಡದಾಗಿದೆ ಅಲ್ವಾ ಅದು? ಆ ಬಾವುಟ ಆಕಾಶಕ್ಕೇ ಮುಟ್ಟೋಹಾಗೆ ಕಾಣಿಸುತ್ತೆ.

ಹುಡುಗ ೪ : ಏಳು ಬೆಟ್ಟದ ತಲೇಮೇಲೆ ರಾಜನ ಅರಮನೆ ಇದೆಯಂತಲ್ಲ, ಅದು ಕೂಡ ಇಷ್ಟು ಚೆನ್ನಾಗಿಲ್ವಂತೆ.

ಹುಡುಗ ೨ : ರಾಜನ ಅರಮನೆ ಹ್ಯಾಗಿದೆಯೋ, ಯಾರಿಗೆ ಗೊತ್ತು? ಅದನ್ನ ಯಾರೂ ನೋಡಿಲ್ಲ ಈತನಕ.

ಹುಡುಗ ೪ : ಯಾರೂ ನೋಡಿಲ್ಲ ಅನ್ಬೇಡ, ನಾವು ನೋಡಿಲ್ಲ ಅಷ್ಟೆ. ನೋಡೋರು ನೋಡಿದಾರೆ. ದೊಡ್ಡೋರು ನೋಡಿಲ್ವಾ?

ಹುಡುಗ ೨ : ನಾನಂತೂ ನೋಡಿಲ್ಲ. ನಾವು ನೋಡಿರೋದು ಈ ಅಂಚೆಮನೆ.

ಹುಡುಗ ೧ : ಯಾತಕ್ಕೆ ಕಟ್ಟಿಸಿರೋದು ಆ ಅಂಚೆಮನೆ ಗೊತ್ತಾ?

ಹುಡುಗ ೨ : ಆ ಅಂಚೆಮನೆಗೆ ಊರೂರಿಂದ ಕಾಗದ ಬರುತ್ತೆ. ಬಂದ ಕಾಗದಾನ ಈ ಅಂಚೆ ಮನುಷ್ಯರು ಮನೆಮನೆಗೆ ಹಂಚ್ತಾರೆ.

ಹುಡುಗ ೪ : ಈಗ ಹೋದನಲ್ಲಾ, ಅವನೇ ಅಂಚೆ ಮನುಷ್ಯ. ಇಂಥೋರು ಅಲ್ಲಿ ಎಷ್ಟು ಜನ ಇದಾರೆ ಗೊತ್ತಾ?

ಹುಡುಗ ೩ : (ಆ ಕಡೆ ಮತ್ತೆ ನೋಡಿ) ಹೋಗೇಬಿಟ್ಟ ಅವನು. ನಡೀರೋ, ನಾವೂ ಹೋಗೋಣ.

ಹುಡುಗ ೧ : (ಮಾಧವದತ್ತನ ಮನೆ ಕಡೆ ನೋಡುತ್ತ) ಆ ಪಂಜರ ನೋಡು, ಅಲ್ಲಿ ನೇತುಹಾಕಿದಾರಲ್ಲ, ಎಷ್ಟು ಚೆನ್ನಾಗಿದೆ!

ಹುಡುಗ ೨ : ಬಂಗಾರದ್ದು ಇದ್ದ ಹಾಗೆ ಇದೆ!

ಹುಡುಗ ೩ : ಖಾಲಿ ಪಂಜರ ಬಿಡು.

ಹುಡುಗ ೪ : ಒಂದು ಒಳ್ಳೇ ಚಂದದ ಗಿಳಿ ಇತ್ತು ಅದರಲ್ಲಿ, ಗೊತ್ತಾ? ಅದು ಈ ಮಾಧವದತ್ತನಿಗೆ ರಾಜರೇ ಕಳಿಸಿದ್ದಂತೆ.

ಹುಡುಗ ೩ : ಏನಾಯ್ತು ಅದು?

ಹುಡುಗ ೪ : ಆಗೋದೇನು, ಸತ್ತುಹೋಯ್ತು.

ಹುಡುಗ ೨ : ಈಗ ಖಾಲಿ ಪಂಜರ ನೇತಾಡುತ್ತೆ.

ಹುಡುಗ ೧ : ಈ ಮನೇಲಿ ಯಾರೂ ಹುಡುಗರೇ ಇಲ್ವಾ ?

ಹುಡುಗ ೪ : ಇಷ್ಟು ದಿನ ಇರ್‍ಲಿಲ್ಲ. ಈಗ ಸ್ವಲ್ಪ ದಿನ ಹಿಂದೆ, ಮಾಧವದತ್ತ ಒಬ್ಬ ಹುಡುಗನ್ನ ಕರಕೊಂಡು ಬಂದು ಸಾಕ್ತಾ ಇದಾನಂತೆ.

ಹುಡುಗ ೩ : ಆ ಗಿಳಿ ಸಾಕಿದ ಹಾಗೇನೋ............

ಹುಡುಗ ೪ : ಇಷ್ಟು ದಿನಾ ಆದರೂ ನಾವು ನೋಡಿಲ್ಲಪ್ಪ, ಆ ಹುಡುಗ ಹೇಗಿದ್ದಾನೆ ಅಂತಲೂ.

ಹುಡುಗ ೧ : ಊರಿಗೆ ಬಂದ ಮೇಲೆ ಕಾಣದೆ ಎಲ್ಲಿಗೆ ಹೋಗ್ತಾನೆ ಬಿಡು.

ಹುಡುಗ ೨ : ಒಂದಲ್ಲ ಒಂದು ದಿನ ಕಂಡೇ ಕಾಣ್ತಾನೆ.

ಹುಡುಗ ೩ : ಏಯ್, ಹೋಗೋಣ ನಡೀರೋ. ಆಟದ ಸಾಮಾನೆಲ್ಲ ಆ ಬಯಲಲ್ಲೇ ಬಿಟ್ಟು ಬಂದಿದೇವೆ............

(ಎಲ್ಲರೂ ಓಡೋಡುತ್ತ ನಿಷ್ಕ್ರಮಿಸುವರು. ಮಾಧವದತ್ತನ ಮನೆಯೊಳಗಿಂದ ವೈದ್ಯ ಹಜಾರಕ್ಕೆ ಪ್ರವೇಶಿಸುತ್ತಾನೆ.)

ವೈದ್ಯ : (ಹಿಂದಕ್ಕೆ ನೋಡುತ್ತ) ಮಾಣಿ............

ಮಾಣಿ : ಬಂದೆ ಗುರುಗಳೆ. (ಚೀಲ ಹೊತ್ತು ಒಳಗಿನಿಂದ ಓಡಿ ಬರುವನು.)

ವೈದ್ಯ : ಕಲ್ಲುಬತ್ತು, ಹಾರೆ, ತ್ರಾಸು, ಸಂಚಿ—ಎಲ್ಲಾ ತಕೊಂಡ್ಯಾ ?

ಮಾಣಿ : ತಗೊಂಡೆ ಗುರುಗಳೆ.

ವೈದ್ಯ : ಮತ್ತೇನಾದರೂ ಬಿಟ್ಟೆಯಾ ?

ಮಾಣಿ : ಇಲ್ಲ ಗುರುಗಳೆ.

ವೈದ್ಯ : ಇಕೋ, ನೀನೊಬ್ಬ ಮುಠ್ಠಾಳ !

(ಒಳಗಿನಿಂದ ಮಾಧವದತ್ತನ ಪ್ರವೇಶ.)

ಮಾಧವದತ್ತ : ಅವನು ಇಲ್ದೇನೇ ಹೋಗಿದ್ರೆ ಹೀಗೆ ವ್ಯಥೆಯಾಗ್ತಿರಲಿಲ್ಲ ವೈದ್ಯರೆ, ಯಾವ ಯೋಚನೇನೂ ಇರ್‍ತಿರಲಿಲ್ಲ. ಏನೋ ದೇವರ ದಯ, ಈ ಮನೇಗೆ ಬಂದ. ಮಕ್ಕಳಿಲ್ಲದ ಈ ಮನೇಗೆ ಬಂದು ಮನೇ ಬೆಳಕಾದ. ಈಗ ಅವನೇನಾದ್ರೂ............

ವೈದ್ಯ : ಇಕೋ ನೋಡಿ, ಹೇಳ್ತೇನೆ, ಅವನ ಹಣೆಯಲ್ಲಿ ಆಯುಸ್ಸು ಗಟ್ಟಿಯಾಗಿ

ಬರೆದಿದ್ರೆ ಬಹಳ ಕಾಲ ಬದುಕಲೂ ಬಹುದು. ಆದರೆ ಆಯುರ್ವೇದ ದಲ್ಲಿ ಬರೆದಿರುವಂತೆಯಾದರೋ............

ಮಾಧವದತ್ತ : ವೈದ್ಯರೆ, ನೀವೇ ಹೀಗೆ ಹೇಳಿದರೆ........

ವೈದ್ಯ : ನಾನಲ್ಲ, ಇಕೋ, ಶಾಸ್ತ್ರ ಹೀಗಂತ ಹೇಳುತ್ತದೆ— 'ಪೈತ್ತಿಕಾನ್ ಸನ್ನಿಪಾತಜಾನ್ ಕಫವಾತಸಮುದ್ಭವಾನ್...........'

ಮಾಧವದತ್ತ : ಈ ಶ್ಲೋಕಗಳನ್ನು ಮಾತ್ರ ಶುರು ಮಾಡಬೇಡಿ ವೈದ್ಯರೆ, ನನ್ನ ಭಯ ಹೆಚ್ಚುತ್ತೆ. ಈಗ ಏನು ಮಾಡ್ಬೇಕು ಅನ್ನೋದನ್ನ ಮೊದಲು ಹೇಳಿ.

ವೈದ್ಯ : (ನಶ್ಯ ಏರಿಸುತ್ತ) ಬಹಳ ಜಾಗರೂಕತೆಯಿಂದ ನೋಡಿಕೊಳ್ಳಬೇಕು.

ಮಾಧವದತ್ತ : ಚಿಕ್ಕ ಹುಡುಗ, ಆಡೋ ವಯಸ್ಸು, ಹಗಲೂ ರಾತ್ರಿ ಮನೇಲೇ ಕಟ್ಟಿ ಹಾಕೋದು ಕಷ್ಟವಲ್ವೆ ?

ವೈದ್ಯ : ಹೌದು, ಕಷ್ಟ. ಆದರೆ ಮಾಡುವದಾದರೂ ಏನು ? ಇಕೋ ಈ ಶರತ್ಕಾಲದ ಗಾಳಿಯೂ ಬಿಸಿಲೂ ಎರಡೂ ಸಹಾ ಹುಡುಗನಿಗೆ ವಿಷ ಇದ್ದ ಹಾಗೆ. ಇದಕ್ಕೆ ಶಾಸ್ತ್ರವೇ ಹೇಳುತ್ತದೆ ನೋಡಿ—'ಅಪಸ್ಮಾರೇ ಜ್ವರೇ ಕಾಶೇ ಕಾಮಲಾಯಂ ಹಲೀಮಕೇ........'

ಮಾಧವದತ್ತ : ಶಾಸ್ತ್ರ ಆಯ್ತಲ್ಲ ವೈದ್ಯರೆ, ಹಾಗಾದ್ರೆ ಈ ಚಿಕ್ಕ ಹುಡುಗನ್ನ ಮನೇಲೇ ಕಟ್ಟಿಹಾಕಬೇಕೆ ? ಬೇರೆ ಯಾವ ಉಪಾಯವೂ ಇಲ್ವೆ ?

ವೈದ್ಯ : ಇಲ್ಲವೇ ಇಲ್ಲ, ಇಲ್ಲವೇ ಇಲ್ಲ. ಯಾತಕ್ಕೋಸ್ಕರ ಅಂದ್ರೆ, ನೋಡಿ— 'ಪವನೇ ತಪನೇ ಚೈವ........'

ಮಾಧವದತ್ತ : ಬಿಡಿ ವೈದ್ಯರೆ, ಹಾಳಾಗ್ಲಿ ಆ ಚೈವ. ಅದನ್ನ ಕಟ್ಟಿಕೊಂಡು ನಾನೇನು ಮಾಡ್ಬೇಕು ?........ ಏನು ಮಾಡೋದು ಹೇಳಿ ಈಗ...........ನಿಮ್ಮ ಚಿಕಿತ್ಸೆ ತುಂಬ ಕಠೋರ, ವೈದ್ಯರೆ. ರೋಗದಿಂದ ಅಷ್ಟು ಸಂಕಟ ಆಗ್ತಿದ್ರೂ ಹುಡುಗ ಮೌನವಾಗಿ ನಗ್ತಾ ನಗ್ತಾ ಸಹಿಸ್ತಾನೆ. ಆದ್ರೆ, ನಿಮ್ಮ ಔಷಧ ಕುಡಿಯೋವಾಗ ಮಾತ್ರ ಅವನು ಪಡೋ ಪಾಡು ನೋಡಲಾರೆ—ನನ್ನ ಎದೆ ಹಿಂಡ್ತದೆ.

ವೈದ್ಯ : ಇಕೋ, ಇದೇ ಮರ್ಮ. ಔಷಧ ಕುಡಿಯುವದಕ್ಕೆ ಪಥ್ಯ ಮಾಡುವ ದಕ್ಕೆ ಎಷ್ಟೆಷ್ಟು ಕಷ್ಟ ಆಗ್ತದೆ, ಅಷ್ಟಷ್ಟೂ ಔಷಧದಿಂದ ಪ್ರಯೋಜನ

ಅಂತ ತಿಳಕೋಬೇಕು. ಮಹರ್ಷಿ ಚ್ಯವನ ಹೀಗಂತ ಹೇಳಿದ್ದಾನೆ ನೋಡಿ—'ಭೇಷಜಂ ಹಿತವಾಕ್ಯಂ ಚ ತಿಕ್ತಮಾಶುಫಲಪ್ರದಂ'. ಹಾಗಾದರೆ ನಾವಿನ್ನು ಬರಬಹುದೋ ?

ಮಾಧವದತ್ತ : ಆಗಲಿ, ವೈದ್ಯರೆ.

ವೈದ್ಯ : ಮಾಣಿ............

ಮಾಣಿ : ಗುರುಗಳೆ............

ವೈದ್ಯ : ಕಲ್ಲಬತ್ತು, ಹಾರೆ, ತ್ರಾಸು, ಸಂಚಿ—ಎಲ್ಲಾ ತಕೊಂಡ್ಯಾ ?

ಮಾಣಿ : ತಗೊಂಡೆ ಗುರುಗಳೆ.

ವೈದ್ಯ : ಮತ್ತೆ ಏನಾದ್ರೂ ಬಿಟ್ಟೆಯಾ ?

ಮಾಣಿ : ಇಲ್ಲ ಗುರುಗಳೆ.

ವೈದ್ಯ : ಇಕೋ, ನೀನೊಬ್ಬ ಮುಠ್ಠಾಳ ! ........ಬಾ........

(ಹೋಗುವನು, ಮಾಣಿ ಹಿಂಬಾಲಿಸುವನು, ಹೊರಗಿನಿಂದ ತಾತನ ಪ್ರವೇಶ.)

ಮಾಧವದತ್ತ : ಅರೆ, ಇವನೆಲ್ಲಿ ಬಂದುಬಿಟ್ಟನಪ್ಪಾ ಮುದುಕ ! ಎಷ್ಟು ದಿನ ಆಗಿತ್ತೋ ಕಾಣದೆ, ಈಗ ಬಂದುಬಿಟ್ಟನಲ್ಲಾ—ಇನ್ನು ಮುಗಿದೇಹೋಯ್ತು.

ತಾತ : ಯಾಕಪ್ಪಾ, ನನ್ನ ನೋಡಿ ಯಾಕೋ ಹಿಂದೆ ಸರೀತಾ ಇದ್ದೀಯೆ ?

ಮಾಧವದತ್ತ : ಬಾ, ತಾತ. ಬಹಳ ಅಪರೂಪ. ಎಷ್ಟು ದಿನ ಆಗಿತ್ತು ಕಾಣದೆ !

ತಾತ : ಅಂ, ಅದೇನೋ ಮುಗಿದೇಹೋಯ್ತು ಅಂತಿದ್ದೆಯಲ್ಲ........

ಮಾಧವದತ್ತ : ನಿನ್ನ ಕೈಗೇನಾದ್ರೂ ಮಕ್ಕಳು ಸಿಕ್ಕಿಬಿಟ್ರೆ ಮುಗಿದೇಹೋಯ್ತು ಅಂತಿದ್ದೆ.

ತಾತ : ನೀನಂತೂ ಮಗುವಲ್ಲ, ನಿನ್ನ ಮನೇಲಿ ಕೂಡ ಮಕ್ಕಳಿಲ್ಲ, ಮತ್ಯಾಕೆ ಆ ಹೆದರಿಕೆ ನಿಂಗೆ ?

ಮಾಧವದತ್ತ : ಈಗ ಈ ಮನೇಲೂ ಒಂದು ಮಗು ಇದೆ ತಾತ.

ತಾತ : ಹೌದಾ ?

ಮಾಧವದತ್ತ : ಒಂದು ಮಗೂನ ತಗೊಂಡುಬಂದು ಸಾಕ್ತಾ ಇದೇನೆ.

ತಾತ : ಹಾಗೇನು ?

ಮಾಧವದತ್ತ : ನನ್ನ ಹೆಂಡತಿ, ಯಾವಾಗಿಂದ ಒಂದು ಮಗೂನ ದತ್ತು ತಗೋಬೇಕು ಅಂತ

ಹಂಬಲಿಸ್ತಾ ಇದ್ದಳಲ್ಲ........

ತಾತ : ಇದ್ದಳು, ಆದ್ರೆ, ನೀನೇ ಬೇಡ ಅಂತಿದ್ದೆಯಲ್ಲ ?

ಮಾಧವದತ್ತ : ಹಾಗೆ ಅಂತಿದ್ದೆ. ಈಗ ತಂದೂ ಆಯ್ತು.

ತಾತ : ಹಾಂ ಹಾಂ........

ಮಾಧವದತ್ತ : ತಾತ, ಏನೋ ತುಂಬಾ ಕಷ್ಟಪಟ್ಟು ಸಂಪಾದನೆ ಮಾಡಿದೆ. ಈ ಊರಲ್ಲಿ ಒಬ್ಬ ಆಢ್ಯಸ್ತ ಅನ್ನಿಸಿಕೊಂಡೆ. ಮನೆ ಆಸ್ತಿ ಎಲ್ಲ ಮಾಡಿದೆ. ಇವಕ್ಕೆಲ್ಲ ದಿಕ್ಕು ಬೇಡವಾ ? ........ಹಾಗಂತ, ಯಾರನ್ನೋ ತಂದಿಟ್ಟುಕೊಂಡು ಅವನು ಈ ಕಷ್ಟಪಟ್ಟು ಸಂಪಾದಿಸಿದ್ದನ್ನೆಲ್ಲಾ ಮೂರು ದಿನದಲ್ಲಿ, ನನ್ನ ಕಣ್ಣೆದುರಿಗೇ, ತೊಳೆದುಬಿಟ್ಟರೆ ಏನು ಮಾಡೋದು ?—ಅದೂ ಕಷ್ಟವೇ ಅಲ್ವಾ ?........ಏನೋ ದೇವರ ದಯೆ, ಸದ್ಯ ಚಿನ್ನದಂಥ ಹುಡುಗನೇ ಸಿಕ್ಕ.

ತಾತ : ಭೇಷ್ ಭೇಷ್, ಎಲ್ಲಿ ಸಿಕ್ಕನಪ್ಪಾ ಹುಡುಗ ?

ಮಾಧವದತ್ತ : ಚಿನ್ನದಂಥಾ ಹುಡುಗ, ತಾತ. ಮುಂದೆ, ನಾನು ಮಾಡಿಟ್ಟದ್ದಷ್ಟನ್ನೂ ಆತ ಬೆಳಗಿಸಿಕೊಂಡು ಹೋಗ್ತಾನೆ ಅಂತ ಧೈರ್ಯ ಬಂದಿದೆ ನಂಗೆ. ಎಷ್ಟು ಸಂತೋಷವಾಗುತ್ತೆ ಗೊತ್ತಾ ?

ತಾತ : ಸಂತೋಷವಪ್ಪಾ ಸಂತೋಷ. ಎಲ್ಲಿಂದ ಕರಕೊಂಡು ಬಂದೆ ?

ಮಾಧವದತ್ತ : ನನ್ನ ಹೆಂಡತಿ ಕಡೆಯಿಂದ ಸಂಬಂಧವೇ ಅನ್ನು. ಲೆಕ್ಕಕ್ಕೆ ಅಣ್ಣನ ಮಗನೇ ಆಗ್ತಾನೆ ನಂಗೆ. ಎಳೇ ವಯಸ್ಸಲ್ಲೇ ತಾಯಿ ತೀರಿಕೊಂಡಳು. ಹಾಗೇ ತಂದೇನೂ ತೀರಿಕೊಂಡ. ತಬ್ಬಲಿ ಮಗು ಪಾಪ.

ತಾತ : ತಬ್ಬಲಿ ಮಗು ಅಂದಮೇಲಂತೂ ನಾನು ಅವನ ಸ್ನೇಹ ಮಾಡಲೇಬೇಕು, ಬಿಡು. ಅವನಿಗೂ ನಾನು ಬೇಕಾಗುತ್ತೆ.

ಮಾಧವದತ್ತ : ಚಿನ್ನದಂಥಾ ಹುಡುಗ, ತಾತ. ಆದ್ರೆ, ಏನು ಮಾಡೋದು, ಅವನ ಆರೋಗ್ಯವೇ ಚೆನ್ನಾಗಿಲ್ಲ. ಅವನ ಈ ಇಂಥಾ ಪುಟ್ಟ ಎಳೇ ಮೈಯಲ್ಲಿ ವಾತ ಪಿತ್ತ ಕಫ ಎಲ್ಲ ಸೇರಿಸಿ ಪ್ರಕೋಪಗೊಂಡುಬಿಟ್ಟದಾವಂತೆ—ಪಂಡಿತರು ಹೇಳಿದರು. ಅದು ಕೇಳಿದಾಗಿನಿಂದ ನನ್ನ ಎದೆ ಒಡೆದುಹೋಗಿದೆ. ಅವನನ್ನ ಗಾಳಿ ಬೆಳಕು ಇಲ್ಲದಿರೋ ಕೋಣೇಲಿ ಮುಚ್ಚಿಟ್ಟಿರಬೇಕಂತೆ ;

ಶರತ್ಕಾಲದ ಗಾಳಿ ಬಿಸಿಲು ತಾಗಿದರೆ ರೋಗ ಉಲ್ಬಣಿಸಿಬಿಡುತ್ತಂತೆ. ಮೊದಲೇ, ಹಾಗೆ ಒಳಗೆ ಕೂರೋ ಹುಡುಗ ಅಲ್ಲ ಅವನು.

ತಾತ : ನನ್ನ ಕೈಗೆ ಸಿಕ್ಕರೆ ಹುಡುಗ ಸರಿಯಾಗ್ತಾನೆ.

ಮಾಧವದತ್ತ : ಅದೇ ನಂಗೂ ಹೆದರಿಕೆ. ಮಕ್ಕಳು ನಿನ್ನ ಕೈಗೆ ಸಿಕ್ಕರೆ ನೀನು ಅವರನ್ನ ಗಾಳಿ ಬೆಳಕಲ್ಲಿ ಕುಣಿಸ್ಯಾಡಿಬಿಡ್ತೀಯೆ. ಅವೂ ಆಮೇಲೆ ನಿನ್ನ ಬಿಟ್ಟು ಇರೋದಿಲ್ಲ.

ತಾತ : ನಿನ್ನ ವೈದ್ಯರು ಹೇಳಿದ ಶರತ್ಕಾಲದ ಗಾಳಿ ಬಿಸಿಲಿನ ಹಾಗೇ ನಾನು— ಅಂತಿಯೇ ಹೌದೋ ಅಲ್ಲೋ? ಆದ್ರೂ, ಹೆದರಬೇಡ, ನಾನು ಮನೆ ಒಳಗೇ ಕೂಡ ಮಕ್ಕಳ ಜತೆ ಆಡಬಲ್ಲೆ............ಹಾಂ, ನೋಡು, ಈಗೆಲ್ಲೊ ಹೊರಟಿದೇನೆ, ಸ್ವಲ್ಪ ಕೆಲಸ ಇದೆ ; ಮುಗಿಸಿ ಆಮೇಲೆ ಬರ್ತೀನೆ, ನಿನ್ನ ರಾಜಕುಮಾರನ್ನ ದರ್ಶನ ಪಡೆಯೋಕೆ.

(ತಾತ ಹೋಗುವನು. ಒಳಗಿಂದ ಅಮಲ ಪ್ರವೇಶಿಸುವನು.)

ಅಮಲ : ಮಾವ........

ಮಾಧವದತ್ತ : ಏನು ಅಮಲ ?

ಅಮಲ : ನಾನು ಅಂಗಳಕ್ಕೂ ಹೋಗಬಾರದಾ ಮಾವ ?

ಮಾಧವದತ್ತ : ಬಾರದು ಮಗು.

ಅಮಲ : ಅಲ್ನೋಡು ಮಾವ, ಅತ್ತೆ ಬೇಳೆ ಒಡೀತಿದಾಳೆ, ಆ ಅಳಿಲು ಬಂದು ಸಣ್ಣ ಸಣ್ಣ ಚೂರ್ನೆಲ್ಲಾ ಅಂ ಅಂತ ನುಂಗುತ್ತೆ. ನಾನು ಅಲ್ಲಿ ಹೋಗಿ ಬರ್ಲಾ ಮಾವ, ಅಳಿಲು ಮಾತಾಡಿಸ್ಕೊಂಡು ಬರೋಕೆ ?

ಮಾಧವದತ್ತ : ಬೇಡ ಮಗು, ಎಲ್ಲೂ ಹೋಗಬಾರದು.

ಅಮಲ : ನಾನು ಅಳಿಲಾದ್ರೂ ಆಗಿದ್ರೆ ಎಷ್ಟು ಚೆನ್ನಾಗಿತ್ತು—ಮಾವ, ನಾನು ಯಾಕೆ ಹೊರಗೆ ಹೋಗಬಾರದು ?

ಮಾಧವದತ್ತ : ಹೊರಗೆ ಹೋದ್ರೆ ನಿನಗೆ ಖಾಯಿಲೆ ಹೆಚ್ಚಾಗುತ್ತೆ ಅಂತ ವೈದ್ಯರು ಹೇಳಿದಾರೆ ಮಗು.

ಅಮಲ : ವೈದ್ಯರಿಗೆ ಹೇಗೆ ಗೊತ್ತಾಯ್ತು ?

ಮಾಧವದತ್ತ : ವೈದ್ಯರಿಗೆ ತಿಳಿಯೋದಿಲ್ವೆ ? ಅವರು ದೊಡ್ಡ ದೊಡ್ಡ ಪುಸ್ತಕ ಎಲ್ಲಾ

ಓದ್ಕೊಂಡಿರ್ತಾರೆ.

ಅಮಲ : ಪುಸ್ತಕ ಓದಿಬಿಟ್ರೆ ಎಲ್ಲಾ ಗೊತ್ತಾಗಿಬಿಡುತ್ತಾ ಮಾವ ?

ಮಾಧವದತ್ತ : ಹುಂ, ಮತ್ತೆ.

ಅಮಲ : ನಾನು ಯಾವ ಪುಸ್ತಕಾನೂ ಓದಿಲ್ವಲ್ಲ ಮಾವ, ಅದಕ್ಕೇ ನನಗೆ ಗೊತ್ತಿಲ್ಲ.

ಮಾಧವದತ್ತ : ದೊಡ್ಡ ದೊಡ್ಡ ಪಂಡಿತರೆಲ್ಲ ನಿನ್ನ ಹಾಗೇ ಇರೋದು ಅಮಲ—ಅವರು ಮನೆ ಬಿಟ್ಟು ಹೊರಗೆ ಹೊರಡೋದೆ ಇಲ್ಲ.

ಅಮಲ : ಯಾಕೆ ?

ಮಾಧವದತ್ತ : ಹ್ಯಾಗೆ ಹೊರಡ್ತಾರೆ ಹೇಳು. ಪುಸ್ತಕ ಓದ್ತಾ ಓದ್ತಾ ಮನೇಲೆ ಕೂತಿರಬೇಕಾಗ್ತದೆ. ಅವರಿಗೆ ಬೇರೆ ಕಡೆ ದೃಷ್ಟೀನೇ ಇರೋದಿಲ್ಲ ನೋಡು ಅಮಲ, ನೀನೂ ಕೂಡ ದೊಡ್ಡವನಾದ ಮೇಲೆ ಪಂಡಿತ ನಾಗ್ತೀಯೆ, ದೊಡ್ಡ ದೊಡ್ಡ ಪುಸ್ತಕ ಓದ್ತೀಯೆ. ಜನ ನಿನ್ನ ನೋಡಿ ಮೂಗಿನ ಮೇಲೆ ಬೆರಳು ಇಡ್ತಾರೆ.

ಅಮಲ : ಇಲ್ಲ ಮಾವ, ನಾನು ಪಂಡಿತನಾಗೋದಿಲ್ಲ.

ಮಾಧವದತ್ತ : ಏನು ಹೇಳ್ತಾ ಇದ್ದೀಯೆ ಅಮಲ, ಪಂಡಿತನಾಗೋದು ಅಂದ್ರೆ ಏನು ಸಾಮಾನ್ಯವಾ ?

ಅಮಲ : ನಾನು ಹಾಗೆ ಮನೇಲೇ ಕೂರೋದಿಲ್ಲ. ಹೊರಗೆ ಹೋಗ್ತೇನೆ, ಎಲ್ಲಾ ನೋಡ್ತೇನೆ.

ಮಾಧವದತ್ತ : ಹೊರಗೆ ಏನಿದೆ ಅಂಥಾದ್ದು ನೋಡೋದು ?

ಅಮಲ : ಅಲ್ಲಿ ದೂರದಲ್ಲಿ ಒಂದು ಗುಡ್ಡ ಕಾಣಿಸೋದಿಲ್ವಾ ? ಅದನ್ನ ಹತ್ತಿ ಅದರ ಆಚೆಗೆ ಹೋಗ್ಬೇಕು ನಾನು.

ಮಾಧವದತ್ತ : ಹುಚ್ಚಪ್ಪಾ, ಕೆಲಸವಿಲ್ಲ ಕಾರ್ಯವಿಲ್ಲ, ಗುಡ್ಡ ಹತ್ತುತೀಯಾ ? ಅಲ್ಲಿ ಹೋಗಿ ಮಾಡೋದಾದ್ರೂ ಏನು ?........ಆ ಗುಡ್ಡ ನೋಡು, ನಮ್ಮ ಎದುರಿಗೆ ಒಂದು ಗೋಡೆ ನಿತ್ತ ಹಾಗೆ ನಿತ್ತಿದೆ ಅಲ್ವಾ ? ಯಾಕೆ ಗೊತ್ತಾ ? ಅದನ್ನ ದಾಟಬಾರದು ಅಂತಲೇ ಕಲ್ಲುಗಳೆಲ್ಲ ಕೂಡಿ ಕೂಡಿ ಗುಡ್ಡ ಆಗಿರೋದು........ಇನ್ನು ಒಳಗೆ ಹೋಗಿ ಮಲಗ್ಕೋತೀಯಾ ಮಗು ? ವೈದ್ಯರು ಹೇಳಿದಾರೆ ಹೌದಾ, ಗಾಳಿಗೆ ಕೂರಬಾರದು ಅಂತ ?

ಅಮಲ : ನಾನು ಸ್ವಲ್ಪ ಹೊತ್ತು ಇಲ್ಲೇ ಕೂತಿರ್ತೇನೆ, ಮಾವ. ಒಬ್ಬನೇ ಒಳಗೆ ಮಲಗಿರೋಕೆ ಬೇಜಾರು.

ಮಾಧವದತ್ತ : ಆಗಲಿ ಮಗು. ಆದ್ರೆ, ಹೆಚ್ಚು ಹೊತ್ತು ಕೂರಬೇಡ, ಸುಸ್ತಾಗುತ್ತೆ. ಸ್ವಲ್ಪ ಹೊತ್ತು ಕೂತಿದ್ದು ಆಮೇಲೆ ಒಳಗೆ ಹೋಗಿ ಮಲಗಿಕೋ. ನಾನು ಹೊರಗಡೆ ಹೋಗಿ ಕೆಲಸ ಮುಗಿಸಿ ಬೇಗ ಬಂದ್ಬಿಡ್ತೇನೆ.

ಅಮಲ : ಆಗಲಿ ಮಾವ.

(ಮಾಧವದತ್ತ ಅವನನ್ನು ಕೂರಿಸಿ ಹೊದಿಸಿ ಹೊರಡುವನು.)

ಮಾಧವದತ್ತ : (ಹೋಗುತ್ತ) ಬೇಗ ಬರ್ತೀನಿ ಆಯ್ತಾ? ತುಂಬ ಹೊತ್ತು ಕೂತ್ಕೋಬೇಡ........ಸುಸ್ತು ಮಾಡಿಕೋಬೇಡ. (ಹೋಗುವನು.)

(ಅಮಲ ಹಾಗೇ ಕೂತಿದ್ದಾನೆ. ಹಿಂಭಾಗದ ರಸ್ತೆಯಲ್ಲಿ ಮೊಸರಿನವನು ಮೊಸರು ಹೊತ್ತು ಕೂಗುತ್ತ ಬರುತ್ತಾನೆ.)

ಮೊಸರಿನವ : ಮೊಸರು ಮೊಸರು........ಮೊಸರು ಬೇಕೇ ಮೊಸರು............ಒಳ್ಳೇ ಮೊಸರು........ಗಟ್ಟೀ ಮೊಸರು........ತಾಜಾ ಮೊಸರು........

ಅಮಲ : ಏ, ಮೊಸರು........ಮೊಸರು........

ಮೊಸರಿನವ : (ಹತ್ತಿರಕ್ಕೆ ಬರುತ್ತ) ಯಾಕಪ್ಪ ಸುಮ್ನೆ ಕೂಗ್ತಿಯಾ, ಕೊಂಡ್ಕೋತಿಯಾ ?

ಅಮಲ : ಹ್ಯಾಗೆ ಕೊಂಡುಕೊಳ್ಳಲಿ, ನನ್ನ ಹತ್ತಿರ ದುಡ್ಡೇ ಇಲ್ವಲ್ಲ ?

ಮೊಸರಿನವ : ಎಂಥಾ ಹುಡುಗನಪ್ಪ ನೀನು ! ಕೊಂಡುಕೊಳ್ಳದೇ ಇದ್ರೆ ಸುಮ್ನೆ ಕೂಗಿ ಯಾಕೆ ನನ್ನ ಹೊತ್ತು ಹಾಳು ಮಾಡ್ತೀಯೆ ?

ಅಮಲ : ನಾನೂ ನಿನ್ನ ಜೊತೆ ಬರೋಹಾಗಿದ್ರೆ ಬಂದುಬಿಡ್ತಿದ್ದೆ.

ಮೊಸರಿನವ : ನನ್ನ ಜೊತೇಗೆ ?

ಅಮಲ : ಹುಂ. ನೀನು ಅಷ್ಟು ದೂರದಿಂದ, ಮೊಸರೂ ಮೊಸರೂ ಅಂತ ಕೂಗ್ತಾ ಬರ್ತಿದ್ದೆಯಲ್ಲ, ನಂಗೆ ಹೇಗಾಗ್ಹೋಯ್ತು ಗೊತ್ತಾ? ........ಆದ್ರೆ ನಾ ಇಲ್ಲಿಂದ ಹೊರಡೋ ಹಾಗಿಲ್ವಲ್ಲ.

ಮೊಸರಿನವ : ಯಾಕೆ, ನೀನು ಮನೇ ಬಿಟ್ಟು ಎಲ್ಲೂ ಹೋಗೋದೇ ಇಲ್ವಾ ?

ಅಮಲ : ಇಲ್ಲ. ನಾನು ಮನೇ ಬಿಟ್ಟು ಹೊರಡಬಾರ್ದು ಅಂತ ವೈದ್ಯರು ಕಟ್ಟು

ಹಾಕ್ಬಿಟ್ಟದಾರೆ. ಹಗಲೆಲ್ಲ ಹೀಗೇ ಕೂತಿರ್ತೇನೆ.

ಮೊಸರಿನವ : ಯಾಕಪ್ಪಾ, ಏನಾಗಿದೆ ನಿಂಗೆ ?

ಅಮಲ : ಏನೋ, ಏನಾಗಿದೆ ಅಂತ ಗೊತ್ತಿಲ್ಲ ನಂಗೆ. ನಾನು ಏನೂ ಓದಿಲ್ವಲ್ಲ, ಅದಕ್ಕೇ ಏನಾಗಿದೆ ಅನ್ನೋದು ಗೊತ್ತಾಗೋದಿಲ್ಲ........ನೀ ಎಲ್ಲಿಂದ ಬಂದಿದ್ದು ?

ಮೊಸರಿನವ : ನಮ್ಮ ಹಳ್ಳಿಯಿಂದ.

ಅಮಲ : ಹಳ್ಳಿಯಿಂದ ? ತುಂಬ ದೂರ ಇದೆಯಾ ನಿನ್ನ ಹಳ್ಳಿ ?

ಮೊಸರಿನವ : ಆ ಗುಡ್ಡ ಕಾಣತ್ತಲ್ಲ, ಅದರ ಕೆಳಗೆ, ಹೊಳೆ ದಡದಲ್ಲಿ ನಮ್ಮ ಹಳ್ಳಿ.

ಅಮಲ : ಗುಡ್ಡದ ಕೆಳಗೆ ? ಹೊಳೆ ದಂಡೆ ಮೇಲೆ ? ಹಿಂದೆ ಒಂದು ಸಾರಿ ನಾನು ನೋಡಿದೇನೋ ಏನೋ........ನೆನಪಿಲ್ಲ.

ಮೊಸರಿನವ : ಆ ಗುಡ್ಡದ ಕೆಳಗೆ ಹೋಗಿದ್ದೆಯಾ ನೀನು ?

ಅಮಲ : ಇಲ್ಲ, ಹೋಗಿಲ್ಲ ಅಂತ ಕಾಣತ್ತೆ. ಆದ್ರೂ ನನ್ಗೆ, ನೋಡಿದೇನೆ ಅನ್ಸತ್ತೆ............ಹಳೇ ಕಾಲದ ಭಾರೀ ಭಾರೀ ಮರಗಳ ಕೆಳಗೆ ಕೆಂಪು ಮಣ್ಣಿನ ರಸ್ತೆ, ಅದರ ಪಕ್ಕದಲ್ಲೆ ಅಲ್ವಾ ನಿನ್ನ ಹಳ್ಳಿ ?

ಮೊಸರಿನವ : ಹೌದು, ಅಲ್ಲೇ.

ಅಮಲ : ಅಲ್ಲಿ, ಗುಡ್ಡದ ಕೆಳಗೆ ಯಾವಾಗ್ಲು ದನಕರುಗಳು ಮೇಯ್ತಾ ಇರ್ತಾವಲ್ಲ........

ಮೊಸರಿನವ : ಹೌದು, ಹೌದು.

ಅಮಲ : ಹುಡುಗಿಯರು, ಹಸಿರು ಕೆಂಪು ಸೀರೆ ಉಟ್ಕೊಂಡು ತಲೇಮೇಲೆ ಕೊಡ ಇಟ್ಕೊಂಡು ಹೊಳೇಗೆ ನೀರಿಗೆ ಹೋಗ್ತಿರ್ತಾರೆ........

ಮೊಸರಿನವ : ಸರೀ ಹೇಳ್ತಾ ಇದ್ದೀಯಲ್ಲ. ನೀನೆಲ್ಲೊ ಅಲ್ಲಿ ಹೋಗಿರ್ಬೇಕು, ಒಂದ್ಸಲ.

ಅಮಲ : ಇಲ್ಲಪ್ಪ, ನಿಜವಾಗಿ ನಾನು ಈತನಕ ಅಲ್ಲಿ ಬಂದಿಲ್ಲ........ನೋಡು, ವೈದ್ಯರು ನಾನಿನ್ನು ಹೊರಗೆ ತಿರುಗಾಡೋದಕ್ಕೆ ಹೋಗ್ಬಹುದು ಅಂದ ಮೇಲೆ, ನೀ ನನ್ನನ್ನ ನಿಮ್ಮ ಹಳ್ಳೀಗೆ ಕರಕೊಂಡು ಹೋಗ್ತೀಯಾ ?

ಮೊಸರಿನವ : ಖಂಡಿತ ಕರಕೊಂಡು ಹೋಗ್ತೇನೆ.

ಅಮಲ : ನಂಗೂ, ನಿನ್ನ ಹಾಗೇ ಮೊಸರು ಮಾರೋದನ್ನ ಕಲಿಸ್ತೀಯಾ? ನಾನೂ

ಗಡಿಗೇಲಿ ಮೊಸರು ಹೊತ್ಕೊಂಡು, 'ಮೊಸರೂ ಮೊಸರೂ' ಅಂತ ಕೂಗ್ತಾ ಬರ್ತೀನೆ.

ಮೊಸರಿನವ : ನೀ ಯಾಕೆ ಮೊಸರು ಮಾರ್ಬೇಕು ಮಗೂ ? ದೊಡ್ಡ ದೊಡ್ಡ ಪುಸ್ತಕ ಓದಿ ಪಂಡಿತನಾಗ್ಬೇಕು ನೀನು.

ಅಮಲ : ಇಲ್ಲ ಇಲ್ಲ. ನಾನು ಪಂಡಿತನಾಗೋದಿಲ್ಲ. ಕೆಂಪು ಮಣ್ಣಿನ ದಾರಿ, ಪಕ್ಕದಲ್ಲಿ ಹಳೇ ಕಾಲದ ಭಾರೀ ಭಾರೀ ಮರಗಳು, ಅಲ್ಲೇ ಇರೋ ನಿಮ್ಮ ಹಳ್ಳಿಯಿಂದ ಮೊಸರು ತೆಂದು ಮಾರ್ತಾ ತಿರಗ್ತೀನೆ, ಮೊಸರೂ ಮೊಸರೂ ಅಂತ ಕೂಗ್ತಾ........ಮೊಸರೂ........ಮೊಸರೂ........—ಥೂ, ನಂಗೆ ಬರೋಲ್ಲ ಕೂಗೋಕೆ........ನೀನೇ ಹೇಳ್ಕೊಡ್ಬೇಕು.

ಮೊಸರಿನವ : ಒಳ್ಳೆ ಹೇಳ್ದೆ ಬಿಡು, ಈ ದನಿ ಕಲೀಬೇಕಾ ನೀನು ?

ಅಮಲ : ಹೌದು. ಅದನ್ನ ಕೇಳಿದ್ರೆ ಒಳ್ಳೇ ಹಾಡು ಕೇಳಿದ ಹಾಗೆ ಆಗುತ್ತೆ, ಮೈಯಲ್ಲಿ ಏನೋ ತುಳುಕ್ತಾ ಇದ್ದ ಹಾಗೆ ಅನ್ನಿಸತ್ತೆ.

ಮೊಸರಿನವ : ಒಂದು ಬಟ್ಟಲು ಮೊಸರು ಕೊಡ್ತೀನೆ, ಕುಡಿ ತಗೋ.

ಅಮಲ : ನನ್ನ ಹತ್ತಿರ ದುಡ್ಡು ಇಲ್ವಲ್ಲ ?

ಮೊಸರಿನವ : ನೀನು ದುಡ್ಡು ಕೊಟ್ಟರೂ ತಗೋಳ್ಳೋಲ್ಲ ಮಗು. ಮೊಸರು ತರೋವಾಗ ಊರ ಮುಂದಿನ ಗುಡೀಲಿ ದೇವರ ಎದುರು ಇಟ್ಟು, ಕೈಮುಗಿದು ತರ್ತೀನೆ. ಹಾಗೇ, ಇನ್ನು ದಿನಾ ನಿನಗೆ ಸ್ವಲ್ಪ ಕೊಟ್ಟು ಹೋಗ್ತೀನೆ. ನೀನು ನನ್ನ ಮೊಸರು ಕುಡಿದ್ರೆ ಸಾಕು, ನಂಗೆ ಚೆನ್ನಾಗಿ ವ್ಯಾಪಾರ ಆಗುತ್ತೆ. (ಅಮಲನಿಗೆ ಮೊಸರು ಕೊಟ್ಟು ಕುಡಿಸುವನು.)

ಅಮಲ : ಅಲ್ಲಿ, ರಸ್ತೆ ಆಚೆ ಭಾರೀ ಕೆಂಪು ಮನೆ ಕಾಣತ್ತಲ್ಲ, ಅದೇನು ಗೊತ್ತಾ ? ಯಾವಾಗ್ಲೂ ತುಂಬ ಜನ ಬರ್ತಾರೆ, ಹೋಗ್ತಾರೆ ; ಮೇಲ್ಗಡೆ ಒಂದು ಬಾವುಟ ಹಾರ್ತಾ ಇದೆ........

ಮೊಸರಿನವ : ಅದೇನೋ ನಂಗೂ ಗೊತ್ತಿಲ್ಲ, ಹೊಸದಾಗಿ ಕಟ್ಟಿಸಿದ್ದು, ಅಂಚೆಮನೆ ಅಂಚೆಮನೆ ಅಂತಾರೆ. (ಮೊಸರು ತಲೆಗಿಟ್ಟುಕೊಳ್ಳಲು ಅಣಿ ಮಾಡುವನು)

ಅಮಲ : ಓ, ನಿಂಗೆ ಹೊತ್ತಾಗಿಹೋಯ್ತು ಅಲ್ವಾ ?

ಮೊಸರಿನವ : ಹೊತ್ತೇನು ಬಿಡು ಮಗು ! ಮೊಸರು ಮಾರೋದು ಯಾವಾಗ್ಲೂ

ಇದ್ದದ್ದೇ. ನಿನ್ನಂಥಾ ಪುಟ್ಟ ದೇವರು ಯಾವಾಗ್ಲೂ ಸಿಕ್ತಾನಾ ? (ಮೊಸರನ್ನೆತ್ತಿಕೊಂಡು ಹೋಗುವನು.)

ಅಮಲ : (ಅವನು ಹೋಗುವುದನ್ನೇ ನೋಡುತ್ತಿದ್ದು, ಮರೆಯಾದ ಮೇಲೆ, ಎದ್ದು ತಲೆಯ ಮೇಲೆ ಗಡಿಗೆಯಿಟ್ಟುಕೊಂಡಂತೆ ನಟಿಸುತ್ತ, ಅಲ್ಲಿ ಹೆಜ್ಜೆ ಹಾಕುತ್ತಾ, ಅವನ ರಾಗವನ್ನೇ ಅಭ್ಯಾಸ ಮಾಡುತ್ತ) ಮೊಸರೂ........ ಮೊಸರೂ........ ತಾಜಾ ಮೊಸರೂ, ಥೇಂಡೀ ಮೊಸರೂ........ ಹತ್ತೀ ಹಾಗೆ, ಹೂವೀನ್ಹಾಗೆ........ಹೂವೀನ್ಹಾಗೆ ನೋಡದ್ಹಾಗೆ........ತಾಜಾ ಮೊಸರೂ ಥೇಂಡೀ ಮೊಸರೂ........ಮೊಸರೂ........ (ತಟಕ್ಕನೆ ದೂರದಲ್ಲಿ ಪಹರೆಯವ ಬರುತ್ತಿರುವುದನ್ನು ಕಂಡು) ....ಓ, ಪಹರೆಯವನು ! ........ಪಹರಿ ಮಾವ, ಪಹರೆ ಮಾವ........ಬರ್ತೀಯಾ ಇಲ್ಲಿ ?........

ಪಹರೆಯವ : (ಬರುತ್ತ) ಏನಪ್ಪಾ, ಯಾಕೆ ಕೂಗ್ತಾ ಇದ್ದೀಯಾ ?........ನನ್ನ ಕಂಡರೆ ಹೆದರಿಕೆ ಆಗೋದಿಲ್ವಾ ನಿಂಗೆ ?

ಅಮಲ : ಯಾಕೆ ? ಯಾಕೆ ಹೆದರಿಕೆ ಆಗ್ಬೇಕು ?

ಪಹರೆಯವ : ನಾನೆಲ್ಲಾದ್ರೂ ನಿನ್ನ ಹಿಡ್ಕೊಂಡು ಹೋದ್ರೆ ಅಂತ........

ಅಮಲ : ಹಿಡ್ಕೊಂಡು ಹೋದ್ರೆ ? ಎಲ್ಲಿಗೆ ಹಿಡ್ಕೊಂಡು ಹೋಗ್ತೀಯೆ ಪಹರಿ ಮಾವ ? ಬಹಳ ದೂರ ಕರ್ಕೊಂಡು ಹೋಗ್ತೀಯಾ ? ಅಲ್ಲಿ ಕಾಣುತ್ತಲ್ಲ, ಆ ಗುಡ್ಡದ ಆಚೆಗೆ ?

ಪಹರೆಯವ : ರಾಜನ ಹತ್ರ ಹಿಡ್ಕೊಂಡು ಹೋಗಿಬಿಟ್ರೆ ?

ಅಮಲ : ರಾಜನ ಹತ್ರ?ಭೇಷ್ ! ಬೇಗ ಹಿಡ್ಕೊಂಡು ಹೋಗ್ತೀಯಾ ಪಹರೆಮಾವ ? ನಂಗೆ ವೈದ್ಯರು ಮನೇ ಬಿಟ್ಟು ಇಳೀಬಾರ್ದು ಅಂತ ಕಟ್ಟು ಮಾಡಿಬಿಟ್ಟಿದಾರೆ. ಯಾರೂ ನನ್ನ ಹಿಡ್ಕೊಂಡು ಹೋಗೋದೇ ಇಲ್ಲ. ಹಗಲೂರಾತ್ರಿ ನಾನು ಇಲ್ಲೇ ಕೂತಿರ್ಬೇಕು.

ಪಹರೆಯವ : ಪಾಪ ? ವೈದ್ಯರು ಕಟ್ಟು ಮಾಡಿದಾರಾ ?.......ಅಯ್ಯೋ, ಪಾಪ, ಅದಕ್ಕೇ ಈ ನಕ್ಷತ್ರದಂಥ ಕಣ್ಣು ಕಪ್ಪಾಗಿದಾವೆ. ಹೂವಿನ ಹಾಗಿರೋ ರಾಜ, ನಲುಗಿಬಿಟ್ಟಿದ್ದೀಯೆ !

ಅಮಲ : ಪಹರೆಮಾವ, ನೀನು ಗಂಟೆ ಹೊಡೆಯೋದಿಲ್ವಾ ?

ಪಹರೆಯವ : ಇನ್ನೂ ಗಂಟೆ ಹೊಡೆಯೋ ಹೊತ್ತಾಗಿಲ್ಲ.

ಅಮಲ : ಆ ಮೊಸರಿನವ ಹೇಳಿದ ಹೊತ್ತಾಗಿಹೋಯ್ತು ಅಂತ, ನೀನು ಹೇಳ್ತೀಯ ಇನ್ನೂ ಹೊತ್ತಾಗಿಲ್ಲ ಅಂತ........ಈಗ ನೀನು ಗಂಟೆ ಹೊಡೆದುಬಿಟ್ರೆ ಹೊತ್ತಾಗಿಬಿಡೋದಿಲ್ವಾ ?

ಪಹರೆಯವ : ಹಾಗಲ್ಲ ಮರಿ, ಹೊತ್ತಾದ ಮೇಲೇ ಗಂಟೆ ಹೊಡೀಬೇಕು.

ಅಮಲ : ಎಷ್ಟು ಚೆನ್ನಾಗಿರುತ್ತೆ ನಿನ್ನ ಗಂಟೆ !........ಮಧ್ಯಾಹ್ನದ ಹೊತ್ತು, ನಮ್ಮ ಮನೇಲಿ ಎಲ್ರಿಗೂ ಊಟ ಆಗಿ, ನಮ್ಮಾವ ಕೆಲಸಕ್ಕೆ ಹೊರಗೆ ಹೋಗಿರ್ತಾರೆ; ಅತ್ತೆ ರಾಮಾಯಣ ಓದ್ತಾ ಹಾಗೇ ನಿದ್ದೆ ಬಂದು ಒರಗಿರ್ತಾಳೆ ; ನಮ್ಮ ಪುಟ್ಟ ನಾಯಿಮರಿ ಅಂಗಳದ ಆಚೆ ನೆರಳಲ್ಲಿ, ಬಾಲದಲ್ಲಿ ಮುಖ ಮುದುರಿಕೊಂಡು ಮಲಗಿರುತ್ತೆ— ಆಗ, ನಿನ್ನ ಗಂಟೆ ಬಾರಿಸತ್ತೆ. ಢಾಣ್........ಢಾಣ್........ಢಾಣ್........ಅಂತ. ಆ ಗಂಟೆ ಏನೋ ಹೇಳ್ತಾ ಇದೆ ಅನ್ನಿಸತ್ತೆ ನಂಗೆ.

ಪಹರೆಯವ : ಹೂಂ. ಅದು ಎಲ್ರಿಗೂ ಕೂಗಿ ಕೂಗಿ ಹೇಳತ್ತೆ, ಹೊತ್ತು ನಿಲ್ಲೋದಿಲ್ಲ ಹೋಗ್ಬಿಡತ್ತೆ—ಅಂತ.

ಅಮಲ : ಹೊತ್ತು ಎಲ್ಲಿಗೆ ಹೋಗುತ್ತೆ, ಯಾವ ದೇಶಕ್ಕೆ ಹೋಗುತ್ತೆ ?

ಪಹರೆಯವ : ಎಲ್ಲೀಗೆ ಹೋಗತ್ತೆ ಅಂತ ಯಾರಿಗೂ ತಿಳೀದು.

ಅಮಲ : ದೊಡ್ಡ ದೊಡ್ಡ ಪುಸ್ತಕ ಓದ್ದೋರಿಗೂ ತಿಳಿದಿಲ್ವಾ ?........ಆ ದೇಶ ಯಾರೂ ನೋಡೇ ಇಲ್ಲ ಅಂತ ಕಾಣುತ್ತೆ. ಪಹರೆಮಾವ, ಹೊತ್ತಿನ ಜತೆ ನಾನೂ ಆ ದೇಶಕ್ಕೆ ಹೋಗಬೇಕು ಅನ್ನಿಸುತ್ತೆ— ಯಾರೂ ತಿಳೀದ ಆ ದೇಶಕ್ಕೆ, ದೂರ ದೂರದಲ್ಲಿರೋ ಆ ದೇಶಕ್ಕೆ !

ಪಹರೆಯವ : ಆ ದೇಶಕ್ಕೆ ಎಲ್ಲಾ ಹೋಗೇ ಹೋಗ್ತಾರೆ, ಒಂದಲ್ಲ ಒಂದು ದಿನ.

ಅಮಲ : ನಾನೂ ಹೋಗ್ತೇನಾ ?

ಪಹರೆಯವ : ಹೋ. ನೀನೂ ಹೋಗ್ತೀಯ.

ಅಮಲ : ಆದ್ರೆ, ನಾನು ಮನೇ ಬಿಟ್ಟು ಹೊರಡಲೇಬಾರ್ದು ಅಂತ ವೈದ್ಯರು ಅಪ್ಪಣೆ ಮಾಡಿದಾರಲ್ಲ........

ಪಹರೆಯವ : ಒಂದು ದಿನ, ವೈದ್ಯರೇ ನಿನ್ನನ್ನ ಕರ್ಕೊಂಡು ಹೋಗಬಹುದು.

ಅಮಲ : ಇಲ್ಲ ಇಲ್ಲ, ಅವರು ಇಲ್ಲೇ ಕೂರಿಸ್ತಾರೆ ; ಎಲ್ಲೂ ಕರ್ಕೊಂಡು ಹೋಗೋಲ್ಲ. ಪಹರೆಮಾವ, ನನ್ನ ಯಾರೂ ಕರ್ಕೊಂಡು ಹೋಗೋದೇ ಇಲ್ವಾ ?

ಪಹರೆಯವ : ಹಾಗೆ ಹೇಳ್ಬಾರದು ಮಗು.

ಅಮಲ : ನಾನು ಯಾವಾಗ್ಲೂ ಇಲ್ಲೇ ಕೂತಿರ್ತೀನಲ್ಲ, ಅಲುಗಾಡೋದೂ ಇಲ್ಲ. ಆದ್ರೆ, ನಿನ್ನ ಗಂಟೆ ಬಾರಿಸ್ತು ಅಂದ್ರೆ ನನ್ನ ಮನಸ್ಸು ಹುಚ್ಚೆದ್ದು ಹೋಗ್ಬಿಡುತ್ತೆ........ಪಹರೆಮಾವ....—

ಪಹರೆಯವ : ಏನು ಮರಿ ?

ಅಮಲ : ಅಲ್ಲಿ, ರಸ್ತೆ ಆಚೆ ಭಾರೀ ದೊಡ್ಡ ಮನೆ ಕಾಣಿಸುತ್ತಲ್ಲ, ಭಾರೀ ಕೆಂಪು ಮನೆ, ಮೇಲೆ ಬಾವುಟ ಹಾರ್‍ತಾ ಇದೆ, ಏನು ಅದು ? ಅಲ್ಲಿ ಯಾಕೆ ತುಂಬ ಜನ ಹೋಗ್ತಾರೆ ಬರ್‍ತಾರೆ ?

ಪಹರೆಯವ : ಅಲ್ಲಿ ಒಂದು ಅಂಚೆಮನೆ ತೆಗೆದಿದಾರೆ, ಹೊಸದಾಗಿ.

ಅಮಲ : ಅಂಚೆಮನೆ ? ಯಾರು ತೆಗೆದಿದ್ದು ಅದು ?

ಪಹರೆಯವ : ರಾಜ ! ಮತ್ಯಾರು ಅಂಚೆಮನೆ ತೆರೀತಾರೆ ?

ಅಮಲ : ಓ, ರಾಜನೇ ತೆರೆದಿರೋ ಅಂಚೆಮನೆ ! ಹಾಗಾದ್ರೆ ಅಲ್ಲೀಗೆ ರಾಜನಿಂದ್ಲೇ ಕಾಗದಗಳು ಬರ್‍ತಾವೆ ಅನ್ನು.

ಪಹರೆಯವ : ಹುಂ, ರಾಜನಿಂದ್ಲೂ ಕಾಗ್ದಗಳು ಬರ್‍ತಾವೆ. ನೋಡ್ತಾಹುದು, ಒಂದು ದಿನ ನಿನ್ನ ಹೆಸರಿಗೂ ಕಾಗದ ಬರುತ್ತೆ.

ಅಮಲ : ನನ್ನ ಹೆಸರಿಗೂ ಕಾಗದ ಬರುತ್ತಾ ? ಆದ್ರೆ, ನಾನಿನ್ನೂ ಚಿಕ್ಕವನಲ್ಲ ?

ಪಹರೆಯವ : ಚಿಕ್ಕವರೀಗೆ ಚಿಕ್ಕ ಚಿಕ್ಕ ಕಾಗದ ಬರೀತಾನೆ ರಾಜ.

ಅಮಲ : ಭೇಷ್ ! ಹಾಗಾದ್ರೆ, ನನಗೆ ಯಾವಾಗ ಕಾಗದ ಬರುತ್ತೆ ?........ ಹೌದಾ, ಬರೀತಾನಾ ರಾಜ ?........ನಿಂಗೆ ಹ್ಯಾಗೆ ಗೊತ್ತು ?

ಪಹರೆಯವ : ಮತ್ತೆ ನಿನ್ನಂಥೋನಿಗೆ ಬರೀದೆ ಇನ್ಯಾರಿಗೆ ಬರೀತಾನೆ ರಾಜ ? ಅಂಚೆಮನೆ ತೆರೆದಿರೋದಾದ್ರೂ ಯಾತಕ್ಕೆ ?

ಅಮಲ : ರಾಜನ ಕಾಗದ ಅಂಚೆಮನೇಗೆ ಬರುತ್ತೆ. ಅದನ್ನ ನಂಗೆ ತಂದು ಕೊಡೋರು ಯಾರು ?

ಪಹರೆಯವ : ಅಂಚೆಮನೇಲಿ ರಾಜ ತುಂಬಾ ಜನ ಅಂಚೆಮನುಷ್ಯರನ್ನ ಇಟ್ಟಿದಾನಲ್ಲ

— ನೀನು ನೋಡಿಲ್ವಾ ಅವರನ್ನ ? ಎದೆ ಮೇಲೆ ದೊಡ್ಡ ದೊಡ್ಡ ಚಿನ್ನದ ಬಿಲ್ಲೆಗಳನ್ನ ಹಾಕ್ಕೊಂಡು ತಿರುಗ್ತಾ ಇರ್ತಾರಲ್ಲ........

ಅಮಲ : ಹೌದಾ, ಎಲ್ಲೆಲ್ಲಿ ತಿರುಗ್ತಾರೆ ಅವರು ?

ಪಹರೆಯವ : ಮನೇ ಮನೇ ತಿರುಗ್ತಾರೆ ; ಹಳ್ಳಿ ಹಳ್ಳಿ ತಿರುಗ್ತಾರೆ, ದೇಶ ದೇಶ ತಿರುಗ್ತಾರೆ.

ಅಮಲ : ಪಹರೆಮಾವ, ನಾನು ದೊಡ್ಡವನಾದ ಮೇಲೆ ರಾಜನ ಅಂಚೆಮನುಷ್ಯ ಆಗ್ತೇನೆ.

ಪಹರೆಯವ : ಅಷ್ಟು ಸುಲಭ ಅಲ್ಲ ಮರಿ ಅದು ! ಬಿಸಿಲಲ್ಲಿ ಊರೂರು ಸುತ್ತಬೇಕು.

ಅಮಲ : ಸಂತೋಷವಾಗಿ ಸುತ್ತುತ್ತೇನೆ. ತುಂಬ ಚಂದ ಕೆಲಸ ಅದು. ನಿನ್ನ ಕೆಲಸ ಕೂಡ ಎಷ್ಟು ಚಂದ, ಗಂಟೆ ಹೊಡೆಯೋದು ! ರಾತ್ರಿ, ದೀಪ ಎಲ್ಲ ಆರಿ ಕತ್ತಲು ಕಣ್ಣು ಹತ್ತಿ ಕೂತಿರೋವಾಗ, ಢಾಣ್........ಢಾಣ್........ಢಾಣ್........ಅಂತ........

ಪಹರೆಯವ : (ರಸ್ತೆ ಕಡೆ ನೋಡಿ) ಓ, ಮುಖಂಡ ಬಂದುಬಿಟ್ಟ ! ನಾನು ಹೋಗ್ತೇನೆ ಮಗು. ಹೀಗೆ ಮಾತಾಡ್ತಾ ಇರೋದನ್ನ ಅವನೇನಾದ್ರೂ ನೋಡಿಬಿಟ್ರೆ ಆಗೇಹೋಯ್ತು !........

ಅಮಲ : ಎಲ್ಲಿದ್ದಾನೆ ಮುಖಂಡ, ಎಲ್ಲಿ ?

ಪಹರೆಯವ : ಅಲ್ಲಿ ನೋಡು, ಅಲ್ಲಿ, ತಲೇ ಮೇಲೆ ತಾಳೇಗರಿ ಛತ್ರಿ ಹಿಡಿಸ್ಕೊಂಡು ಬರ್‍ತಿದಾನಲ್ಲ, ಈ ಕಡೇನೇ........

ಅಮಲ : ಯಾರು, ರಾಜನೇ ಅವನನ್ನ ಮುಖಂಡ ಅಂತ ಮಾಡಿದಾನಾ ?

ಪಹರೆಯವ : ಇಲ್ಲಪ್ಪ. ಆತ ತಾನೇ ಮುಖಂಡನಾಗಿ ಕೂತುಬಿಟ್ಟಿದಾನೆ. ಕ್ರೂರಿ, ಕೆಟ್ಟ ಮನುಷ್ಯ, ಜನರನ್ನ ಬೇತಾಳದ ಹಾಗೆ ಬೆನ್ನುಹತ್ತಿ ಪೀಡಿಸ್ತಾನೆ, ಎಲ್ಲಾ ಹೆದರ್‍ಕೋತಾರೆ ಅವನೀಗೆ........ನಾನು ಹೋಗ್ತೇನೆ ಮರಿ. ನಾಳೆ ಬಂದು ನಿನಗೆ ಪಟ್ಟಣದ ಕತೆ ಎಲ್ಲಾ ಹೇಳ್ತೇನೆ....ಅಂ ?........ (ಹೋಗುವನು.)

ಅಮಲ : (ತನ್ನಲ್ಲೇ) ರಾಜನಿಂದ ಪ್ರತೀ ದಿನ ಒಂದೊಂದು ಕಾಗದ ಬರ್‍ತಿದ್ರೆ ಎಷ್ಟು ಚೆನ್ನಾಗಿರ್‍ತಿತ್ತು ! ಇಲ್ಲಿ ಕೂತು ದಿನಾ ಓದ್ತಾ ಇರಬಹುದಿತ್ತು........

ಒಳ್ಳೇ ಹಸಿರು ಕಾಗದ, ಮೂಲೇಲೆಲ್ಲಾ ಹೂವಿನ ಚಿತ್ರ, ಕಾಗದಕ್ಕೆ ಹೂವಿನ ಪರಿಮಳ! —ಆದ್ರೆ, ರಾಜನ ಅಕ್ಷರ ನಂಗೆ ಓದೋಕೆ ಬರ ಬೇಕಲ್ಲ! ....ಬರ್ದೆ ಇದ್ರೆ ಏನಂತೆ, ನೋಡ್ತಾ ಕೂತಿರಬಹುದು....... ಕಾಣೋದಂತೂ ಕಾಣುತ್ತಲ್ಲ.......ಈಗ ಎಲ್ಲಾ ಜೋಪಾನವಾಗಿ ಇಟ್ಕೊಂಡು ಮುಂದೆ ದೊಡ್ಡೋನಾದ ಮೇಲೆ ಓದಬಹ್ದು....ಆದ್ರೆ, ಆ ಅಂಚೆಮನುಷ್ಯನೀಗೆ ನನ್ನ ಗುರ್ತು ಹತ್ತಬೇಕಲ್ಲ, ಕಾಗದ ತಂದು ಕೊಡೋಕೆ....(ರಸ್ತೆ ನೋಡಿ) ಓ, ಮುಖಂಡ! ....... ಮುಖಂಡರೆ, ಮುಖಂಡರೇ....ಸ್ವಲ್ಪ ಬರ್‍ತೀರಾ ?

ಮುಖಂಡ : (ಒಬ್ಬ ಹುಡುಗನ ಹತ್ತಿರ ಕೊಡೆ ಹಿಡಿಸಿಕೊಂಡು ಬರುತ್ತ) ಯಾವನೋ ಅದು, ನಡು ದಾರೀಲಿ ಕೂಗ್ತಿರೋನು, ಮಂಗ ?

ಅಮಲ : ನೀವೇ ಅಲ್ವಾ ಇಲ್ಲೀ ಮುಖಂಡರು ? ಊರಲ್ಲಿ ಎಲ್ಲಾ ನಿಮ್ಮ ಮಾತು ಕೇಳ್ತಾರೆ ಅಲ್ವಾ ?

ಮುಖಂಡ : (ಉಬ್ಬಿ) ಹೌದು, ಹೌದು. ಕೇಳ್ತಾರೆ, ಎಲ್ರೂ ಕೇಳ್ತಾರೆ.

ಅಮಲ : ಅಂಚೆಮನುಷ್ಯರೂ ನಿಮ್ಮ ಮಾತು ಕೇಳ್ತಾರಾ ?

ಮುಖಂಡ : ಕೇಳದಿದ್ರೆ ಅವರ ಜೀವ ಉಳಿಯೋಲ್ಲ ಅಷ್ಟೆ !

ಅಮಲ : ಹಾಗಾದ್ರೆ, ನೀವು ಅವರೀಗೆ ಸ್ವಲ್ಪ ಹೇಳ್ತೀರಾ—ನಾನೇ ಅಮಲ ಅನ್ನೋವನು ಅಂತೆ ? ನಾನು ಯಾವಾಗ್ಲೂ ಇಲ್ಲೇ, ಈ ಜಗಲೀಲೇ ಕೂತಿರ್‍ತೇನೆ.

ಮುಖಂಡ : ಯಾಕೆ, ಏನು ಸಮಾಚಾರ ?

ಅಮಲ : ನನ್ನ ಹೆಸರೀಗೆ ಯಾವ್ದಾದ್ರೂ ಕಾಗದ ಬಂದ್ರೆ.......

ಮುಖಂಡ : ನಿನ್ನ ಹೆಸರಿಗೆ ಕಾಗದಾನೆ ? ನಿಂಗೆ ಯಾರು ಕಾಗದ ಬರೀತಾರೆ ?

ಅಮಲ : ರಾಜನಿಂದ ಕಾಗದ ಬಂದ್ರೆ......

ಮುಖಂಡ : ಹಹ್ಹಹ್ಹಹ್ಹಹ್ಹ......ಪರವಾಯಿಲ್ಲ ಈ ಹುಡುಗ! ಹಹ್ಹಹ್ಹಹ್ಹಹ್ಹ! ರಾಜ ಇವನೀಗೆ ಕಾಗದ ಬರೀತಾನೆ! ಬರೀಬೇಕು, ಬರೀಬೇಕು, ಖಂಡಿತಾ ಬರೀಬೇಕು. ನೀನು ಅವನಿಗೆ ಪರಮಸ್ನೇಹಿತ ತಾನೇ ! ಎಷ್ಟೋ ದಿನ ದಿಂದ ರಾಜ ನಿನ್ನನ್ನ ನೋಡ್ಲೆ ಇಲ್ವಂತೆ, ಅದಕ್ಕಾಗಿ ಅವನು ಕೊರಗ್ತಾ

ಇದ್ದಾನಂತೆ........ನನ್ನ ಹತ್ತಿರ ಕೇಳಿದ......ಇನ್ನೇನು ಇಷ್ಟರಲ್ಲೇ ಕಾಗದ ಬಂದ್ಬಿಡುತ್ತೆ, ನೀ ಏನೂ ಯೋಚ್ನೆ ಮಾಡ್ಬೇಡ!

ಅಮಲ : ಯಾಕೆ ಮುಖಂಡರೆ, ಹಾಗೆ ಮಾತಾಡ್ತಾ ಇದೀರಿ? ನಿಮಗೆ ನನ್ನ ಮೇಲೆ ಸಿಟ್ಟು ಬಂತಾ?

ಮುಖಂಡ : ಛೆ ಛೆ ಛೆ! ನಿನ್ನ ಮೇಲೆ ಸಿಟ್ಟಾಗೋದೆ, ರಾಜನ ಪರಮಸ್ನೇಹಿತನ ಮೇಲೆ! ನನ್ನಲ್ಲಿ ಅಂಥ ಸಾಹಸ ಇದೆಯೆ? ಏ ಹುಡುಗ, ಯೋಚ್ನೆ ಮಾಡ್ಬೇಡ, ರಾಜನ ಕಾಗದ ಬೇಗ ನಿನಗೆ ಬರೋ ಹಾಗೆ ವ್ಯವಸ್ಥೆ ಮಾಡ್ತೇನೆ.

ಅಮಲ : ಬೇಡ ಮುಖಂಡರೆ, ನೀವು ಏನೂ ಮಾಡೋದು ಬೇಡ. ಬೇಕು ಅನ್ನಿಸಿದ್ರೆ ಅವನೇ ಕಾಗದ ಬರೀಲಿ.

ಮುಖಂಡ : ಸರಿ ಸರಿ, ಅವನೇ ಬರೀತಾನೆ ಬಿಡು. (ತನ್ನಲ್ಲಿ) ಪರವಾಯಿಲ್ಲ, ಇಲ್ಲೀವರೆಗಿದೆ ಹುಡುಗನ ಕೊಬ್ಬು!........ಮಾಧವದತ್ತ ಸೊಕ್ಕಿ ಹೋಗಿದಾನೆ, ಕೈಯಲ್ಲಿ ನಾಲ್ಕು ಕಾಸು ಸೇರಿ ಹೋಯ್ತಲ್ಲ—ಮನೇಲಿ ಮಹಾರಾಜರ ಸುದ್ದಿ ಬಿಟ್ಟು ಮಾತೇ ಇಲ್ಲ ಅಂತ ಕಾಣುತ್ತೆ........ಹುಂ. ಈಗಲೇ ತಕ್ಕ ಶಾಸ್ತಿ ಮಾಡ್ಬೇಕು, ಇಲ್ದಿದ್ರೆ ಊರು ಉಳಿಯೋಲ್ಲ. ರಾಜರ ಕಿವೀಗೆ ಈ ಮಾತು ಮುಟ್ಟೋ ಹಾಗೆ ಮಾಡಿದ್ರೆ ಎಲ್ಲ ಸರಿ ಹೋಗುತ್ತೆ. (ಹೊರಡುವನು.)

ಅಮಲ : ಹೊರಟುಬಿಟ್ರಾ ಮುಖಂಡರೆ?

ಮುಖಂಡ : ಹೋಗ್ತೀನಪ್ಪಾ. ರಾಜನ ಕಾಗದ ಬಂದ ಮೇಲೆ ಬಂದು ನೋಡ್ತೇನೆ ನಿನ್ನ. (ಕೊಡೆ ಹುಡುಗನ ಜೊತೆ ಹೋಗುವನು)

(ಸ್ವಲ್ಪ ಹೊತ್ತಿನಲ್ಲಿ ಸುಧಾ, ತನ್ನಷ್ಟಕ್ಕೇ ಹಾಡುತ್ತ ರಸ್ತೆಯಲ್ಲಿ ಬರುತ್ತಾಳೆ.)

ಅಮಲ : ಬಳುಕ್ತಾ ಹೋಗ್ತಿದೀಯಲ್ಲ, ಯಾರು ನೀನು? ಸ್ವಲ್ಪ ನಿಂತ್ಕೋತೀಯಾ?

ಸುಧಾ : ಯಾಕಪ್ಪಾ? ಈಗ್ಲೇ ಹೊತ್ತಾಗಿ ಹೋಗಿದೆ ನಂಗೆ........

ಅಮಲ : ಸುಮ್ನೆ ಕರೆದೆ, ಯಾರು ನೋಡೋಣ ಅಂತ—ಹೊತ್ತಾದ್ರೆ ಹೋಗು.

ಸುಧಾ : (ಹತ್ತಿರ ಬರುತ್ತ) ಓ, ಎಷ್ಟು ಚಂದ ಇದೀಯ ರಾಜ! ಆದ್ರೆ, ಯಾಕೆ,

ಮಂಜು ಬಿದ್ದ ಹೂವಿನ ಹಾಗೆ ನಲುಗಿ ಹೋಗಿದೀಯಾ ? ಏನಾಗಿದೆ ನಿಂಗೆ ?

ಅಮಲ : ಏನಾಗಿದೆ ಅಂತ ನಂಗೂ ಗೊತ್ತಿಲ್ಲ ; ಮನೇ ಬಿಟ್ಟು ಕೆಳಗೆ ಇಳೀಬಾರ್ದು ಅಂತ ವೈದ್ಯರು ಅಪ್ಪಣೆ ಮಾಡಿದಾರೆ.

ಸುಧಾ : ಓ, ಹಾಗಾ ? ಹಾಗಾದ್ರೆ, ಹೊರಗೆಲ್ಲೂ ಹೋಗಬಾರದು ರಾಜಾ. ವೈದ್ಯರು ಹೇಳಿದ ಹಾಗೆ ಕೇಳ್ಬೇಕು, ನೀನು ಜಾಣ, ತಿಳೀತಾ ?

ಅಮಲ : ನೀನು ಯಾರು ಹೇಳ್ಲೇ ಇಲ್ವಲ್ಲ ? ನಂಗೆ ನಿನ್ನ ಗುರುತಿಲ್ಲ.

ಸುಧಾ : ನಾನು ಸುಧಾ.

ಅಮಲ : ಸುಧಾ ?

ಸುಧಾ : ನಿಂಗೆ ಗೊತ್ತಿಲ್ಲ. ನಮ್ಮ ತಂದೆ ಇಲ್ಲಿ ತೋಟ ನೋಡ್ಕೋತಾರೆ.

ಅಮಲ : ಸುಧಾ—ಹೆಸರು ಎಷ್ಟು ಚೆನ್ನಾಗಿದೆ ! ಸುಧಾ, ನೀನು ಏನು ಮಾಡ್ತಾ ಇರ್ತೀಯಾ ?

ಸುಧಾ : ಬುಟ್ಟಿ ತುಂಬಾ ಹೂ ಕೊಯ್ದು ತರ್ತೀನೆ, ಮಾಲೆ ಕಟ್ತೀನೆ ; ಈಗ ಕೂಡಾ ಹೂ ಕೊಯ್ಯೋಕೇ ಹೋಗ್ತಿದೇನೆ.

ಅಮಲ : ಹೂ ಕೊಯ್ಯೋಕೆ ಹೋಗ್ತಿದೀಯಾ ? ಅದಕ್ಕೇ ನಿನ್ನ ಹೆಜ್ಜೆಗಳು ಹಾಗೆ ಕುಣೀತಾ ಇವೆ. ನೀನು ನಡೆಯೋವಾಗ ನಿನ್ನ! ಕಾಲಿನ ಗೆಜ್ಜೆ ಕಡಗ ಹ್ಯಾಗೆ ಝುಣಾ ಝುಣಾ ಅಂತಿದೆ !........ನಾನೂ ನಿನ್ನ ಜತೆ ಬರೋ ಹಾಗಿದ್ದಿದ್ರೆ, ನಿನ್ನ ಕೈಗೆ ಸಿಗದೇ ಇರೋ ಹೂಗಳನ್ನ ಮರ ಹತ್ತಿ ಕೊಯ್ದು ಕೊಡ್ತಿದ್ದೆ........

ಸುಧಾ : ನಿಂಗೆ ಹೂವಿನ ವಿಚಾರ ನನಗಿಂತ ಹೆಚ್ಚು ಗೊತ್ತು ಅಂತ ಕಾಣತ್ತೆ.

ಅಮಲ : ಹೂಂ. ಸಂಪಿಗೇ ಹೂವಿನ ಏಳು ಮಂದಿ ತಮ್ಮಂದಿರು ಇದ್ದಾರಲ್ಲಾ, ಅವರ ಕಥೆ ಎಲ್ಲಾ ನಂಗೊತ್ತು........ನನ್ನನ್ನ ಈಗ ಹೊರಗೆ ಬಿಟ್ರೆ, ಒಬ್ಬನೇ ಎಂಥಾ ಅಡವೀಲಾದ್ರೂ ಹೋಗ್ತೇನೆ ; ಚಿಗುರಿನ ತುದೀಲಿ ಕೂತು ಜೋಕಾಲಿ ಆಡುತ್ತಲ್ಲ ಮೈನಾ ಹಕ್ಕಿ, ಅದರ ಜತೆ ಮಾತಾಡ್ತೇನೆ........

ಸುಧಾ : ಇನ್ನು ಹೊತ್ತಾಗತ್ತೆ, ಹೋಗಲಾ ನಾನು ?

ಅಮಲ : ಹುಂ. ನಿಂಗೆ ಹಗಲಿಡೀ ಹೂ ಕೊಯ್ಯೋದೇ ಇರುತ್ತಾ ?

ಸುಧಾ : ಇಲ್ಲ. ಬೇರೆ ಹೊತ್ತಲ್ಲಿ, ನನ್ನ ಹತ್ತಿರ ಗೊಂಬೆಗಳಿದಾವಲ್ಲ, ಆಡ್ತೇನೆ. ನನ್ನ ಹತ್ತಿರ 'ಚೈನಿ ಹುಡುಗಿ' ಅನ್ನೋ ಗೊಂಬೆ ಇದೆ. ನನ್ನ ಮಿಯಾಂವ್ ಜತೆ ಅದಕ್ಕೆ ಮದುವೆ ಮಾಡ್ತೇನೆ.

ಅಮಲ : ನೀನು ಚಂದ ಮಾತಾಡ್ತೀಯೆ ಸುಧಾ. ದಿನಾ ಬರ್ತೀಯಾ ಮಾತಾಡೋಕೆ ?

ಸುಧಾ : ಓ, ಅದಕ್ಕೇನು. ಆದ್ರೆ ನೀನು ಮಾತ್ರ, ಖಾಯಿಲೆ ಗುಣ ಆಗೋ ತನಕ ವೈದ್ಯರು ಹೇಳಿದ ಹಾಗೆ ಕೇಳ್ಬೇಕು, ಬೇಗ ಗುಣ ಆಗ್ಬೇಕು—ತಿಳೀತಾ?

ಅಮಲ : ಹುಂ.

ಸುಧಾ : ಹೂ ಕೊಯ್ಕೊಂಡು ಮನೆಗೆ ಹೋಗೋ ಹೊತ್ತಿಗೆ ದಿನಾ ಬರ್ತೇನೆ ; ಮಾತಾಡಿ ಹೋಗ್ತೇನೆ.

ಅಮಲ : ನಂಗೂ ಒಂದೆರಡು ಹೂ ಕೊಟ್ಟು ಹೋಗ್ತೀಯಾ ?

ಸುಧಾ : (ನಗುತ್ತ) ಹಾಗೇ ದುಡ್ಡಿಲ್ಲದೆ ತಂದು ಕೊಡ್ಬೇಕಾ ?

ಅಮಲ : ದೊಡ್ಡೋನಾದ ಮೇಲೆ, ಆ ಗುಡ್ಡದ ಆಚೆ ಹೊಳೆ ಹಳ್ಳೀಗೆ ಕೆಲಸಕ್ಕೆ ಹೋಗ್ತೇನಲ್ಲ, ಆಗ ದುಡ್ಡು ಕೊಡ್ತೇನೆ—ಆಗದಾ ?

ಸುಧಾ : ಹಾಗೇ ಮಾಡು ನನ್ನ ರಾಜಾ.

ಅಮಲ : ಹಾಗಾದ್ರೆ ಹೂ ಕೊಯ್ಕೊಂಡು ಬರ್ತೀಯಾ ?

ಸುಧಾ : ಬರ್ತೇನೆ.

ಅಮಲ : ಖಂಡಿತವಾಗಿ ?

ಸುಧಾ : ಖಂಡಿತ ಬರ್ತೇನೆ. (ಹೊರಡುವಳು)

ಅಮಲ : ನನ್ನನ್ನ ಮರೆಯೋದಿಲ್ಲ ಅಲ್ವಾ ? ನನ್ನ ಹೆಸರು ಅಮಲ ಅಂತ. ನೆನಪಿರುತ್ತಾ ?

ಸುಧಾ : (ಹೋಗುವವಳು ತಿರುಗಿ) ಓ, ಖಂಡಿತಾ ನೆನಪಿರತ್ತೆ........ಬರ್ತೇನೆ ರಾಜ. (ಓಡಿ ನಡೆಯುವಳು.)

(ಬಾಲಕ ಬಾಲಕಿಯರು ಪ್ರವೇಶಿಸುತ್ತಾರೆ.)

ಅಮಲ : (ಚಪ್ಪಾಳೆ ತಟ್ಟುವನು, ಹುಡುಗರು ಈ ಕಡೆ ನೋಡುತ್ತಾರೆ.) ಬರ್ತೀರಾ ಇಲ್ಲಿ ?

ಹುಡುಗ ೧ : ನಾವೆಲ್ಲಾ ಆಟ ಆಡೋಕೆ ಹೋಗ್ತಿದೇವೆ.
ಅಮಲ : ಏನು ಆಟ ಆಡ್ತೀರಿ ?
ಹುಡುಗ ೨ : ಗಾಡೀ ಆಟ ಆಡ್ತೇವೆ, ಉಳುಮೆ ಆಟ ಆಡ್ತೇವೆ........
ಹುಡುಗ ೩ : ಮದುವೆ ಆಟ ಆಡ್ತೇವೆ, ಯುದ್ಧದ ಆಟ ಆಡ್ತೇವೆ........
ಹುಡುಗಿ ೧ : ಹೂ ಕೊಯ್ಯೋ ಆಟ, ರಥೋತ್ಸವದ ಆಟ........
ಅಮಲ : ಓ, ಎಷ್ಟೆಲ್ಲ ಆಟ ಆಡ್ತೀರಿ ! ತುಂಬಾ ಚೆನ್ನಾಗಿರುತ್ತೆ, ಅಲ್ವಾ ?........ ಹಗಲೆಲ್ಲಾ ಆಡ್ತೀರಾ ?
ಹುಡುಗ ೪ : ಹುಂ, ಸಂಜೀವರೆಗೂ ಆಡ್ತೇವೆ.
ಅಮಲ : ಆಮೇಲೆ, ಹೊಳೆ ದಡದಲ್ಲಿ ಮನೇಗೆ ಹೋಗ್ತೀರಿ, ಅಲ್ವಾ ?
ಹುಡುಗ ೫ : ಹೌದು, ಕತ್ತಲಾದ ಮೇಲೆ ಮನೇಗೆ ಹೋಗೋದು.
ಅಮಲ : ಸಂಜೆ ಮನೇಗೆ ಹೋಗೋ ಹೊತ್ತಿಗೆ, ನಮ್ಮ ಮನೇ ಮುಂದೇ ಹೋಗ್ತೀರಾ ?
ಹುಡುಗ ೬ : ಯಾಕೆ ?........ನೀನೇ ಬಾ ಹೋಗೋಣ, ಆಡೋದಕ್ಕೆ.
ಅಮಲ : ನನಗೆ ಮನೇ ಬಿಟ್ಟು ಹೋಗಬಾರ್ದು ಅಂತ ವೈದ್ಯರು ಹೇಳಿದಾರೆ.
ಹುಡುಗಿ ೨ : ಯಾಕೆ, ಮೈಯಲ್ಲಿ ಸರೀ ಇಲ್ವಾ ನಿಂಗೆ ?
ಹುಡುಗಿ ೩ : ಪಾಪ, ಸೋತ್ಬಿಟ್ಟಿದಾನೆ.
ಹುಡುಗ ೧ : ವೈದ್ಯರ ಮಾತು ಕೇಳ್ಕೊಂಡು ಮನೇಲೇ ಕೂರ್ತೀಯಾ ?
ಹುಡುಗ ೬ : ಹೋಗೋಣ್ರೋ ನಾವು.
ಅಮಲ : ನೀವೆಲ್ಲ ಸ್ವಲ್ಪ ಹೊತ್ತು ಇಲ್ಲೇ ಅಂಗಳದಲ್ಲಿ ಆಡ್ತೀರಾ ? ನಾನು ನೋಡ್ತೇನೆ.
ಹುಡುಗ ೨ : ಇಲ್ಲಿ ಆಡೋದಕ್ಕೆ ಏನಿದೆ ನಮಗೆ?
ಅಮಲ : ಇಲ್ಲಿ ನನ್ನ ಆಟದ ಸಾಮಾನುಗಳೆಲ್ಲ ಇವೆ, ಸುಮ್ನೆ ಬಿದ್ದಿವೆ. ನಂಗೆ ಒಬ್ನೇ ಆಡೋದಕ್ಕೆ ಬೇಜಾರು. ನೀವಾದ್ರೂ ಆಡಬಹುದು.

(ಎಲ್ಲರೂ ಮೇಲೆ ಹೋಗಿ ಆಟದ ಸಾಮಾನುಗಳನ್ನು ಪರೀಕ್ಷಿಸ ತೊಡಗುತ್ತಾರೆ.)

ಹುಡುಗಿ ೪ : ಆ, ಎಷ್ಟು ಚೆನ್ನಾಗಿದೆ ಅಲ್ವಾ ?

ಹುಡುಗ ೩ : ಇಲ್ಲಿ ನೋಡು ಹಡಗು,........ಇದು ನೋಡು ಅಜ್ಜಿ........ಓ, ಈ ಸಿಪಾಯಿಗೊಂಬೆ ತುಂಬ ಚೆನ್ನಾಗಿದೆ........

ಹುಡುಗಿ ೧ : ಈ ರಥ ನೋಡು, ಎಷ್ಟು ಚೆನ್ನಾಗಿದೆ ಅಲ್ವಾ ?

ಹುಡುಗ ೪ : ಇವನ್ನೆಲ್ಲಾ ಕೊಟ್ಟುಬಿಡ್ತೀಯಾ ನಮಗೆ ?

ಹುಡುಗಿ ೨ : ನಮಗೆ ಕೊಟ್ಟುಬಿಟ್ರೆ ಬೇಜಾರಾಗೋಲ್ವಾ ನಿಂಗೆ!

ಅಮಲ : ಬೇಜಾರಿಲ್ಲ ಏನೂ ಇಲ್ಲ. ಎಲ್ಲಾ ತಗೊಳ್ಳಿ.

ಹುಡುಗ ೬ : ಮತ್ತೆ ಹಿಂದಕ್ಕೆ ಕೊಡೋದು ಬೇಡ್ವಾ ?

ಅಮಲ : ಬೇಡ, ನಿಮಗೇ ಅದು........ನೀವು ದಿನಾ ಬೆಳಿಗ್ಗೆ ಇಲ್ಲಿಗೆ ಬಂದು ಆಟ ಆಡಿ ಹೋಗ್ತೀರಾ ? ಈ ಆಟದ ಸಾಮಾನೆಲ್ಲ ಹಳತಾದ್ರೆ ಮತ್ತೆ ಬೇರೆ ಹೊಸದು ತರಿಸಿಕೊಡ್ತೇನೆ.

ಹುಡುಗ ೨ : ಓಹೋ, ಅದಕ್ಕೇನು, ಇನ್ನು ದಿನಾ ಬೆಳಿಗ್ಗೆ ಬರ್ತೇವೆ.

ಹುಡುಗ ೧ : ಹುಂ, ಇನ್ನು ಬನ್ರೋ, ಆಟ ಶುರುಮಾಡೋಣ.

ಹುಡುಗ ೫ : ಏನು ಆಟ ಆಡೋದು ?

ಹುಡುಗ ೪ : (ಹುಡುಕುತ್ತಿದ್ದವನು) ಇಲ್ನೋಡ್ರೋ, ಬಣ್ಣದ ಕೋಲುಗಳು, ಎಷ್ಟಿದಾವೆ ನೋಡಿ !

ಹುಡುಗಿ ೧ : ಓ, ಎಷ್ಟು ಚೆನ್ನಾಗಿದಾವೆ ಕೋಲು !

ಹುಡುಗ ೧ : ಹಾಗಾದ್ರೆ ಕೋಲಾಟಾನೇ ಆಡೋಣ—ಅಲ್ವಾ ?

ಹುಡುಗ ೬ : ಹೌದು, ಕೋಲಾಟಾನೇ ಆಡೋಣ.

ಹುಡುಗ ೧ : (ಕೋಲು ಹಂಚುತ್ತ) ಹುಂ, ಎಲ್ಲಾ ತಗೋಳ್ರೊ ಹಾಗಾದ್ರೆ........ (ಹುಡುಗಿಯರಿಗೆ) ಈ ಕೋಲು ನೀವು ತಗೊಳ್ಳಿ ನಿಮ್ಮದು ಒಂದು ಗುಂಪು, ನಮ್ಮದು ಒಂದು ಗುಂಪು........

ಹುಡುಗಿ ೩ : ನಮಗೆ ಹಳತಾಗಿರೋ ಕೋಲು ಆರಿಸಿ ಕೊಟ್ಟಿದೀಯೆ.

ಹುಡುಗ ೨ : ಇದೇ ನಿಮ್ಮ ಹೆಂಗಸರದ್ದು, ಯಾವಾಗ್ಲೂ ತಕರಾರು.

ಹುಡುಗಿ ೪ : ಇರಲಿ ಬಿಡೇ, ಹ್ಯಾಗಿದ್ರೇನು ? ನಾವು ಅವರಿಗಿಂತ ಚೆನ್ನಾಗಿ ಆಡಿದರೆ ಆಯ್ತಲ್ಲ.

ಹುಡುಗ ೩ : ಹಾಂ, ಎಲ್ಲ ಕೆಳಗಿಳೀರಿ ಅಂಗಳಕ್ಕೆ, ಶುರುಮಾಡಿ. (ಎಲ್ಲರೂ ಕೆಳಗಿಳಿ

ಯುವರು. ಅಮಲನಿಗೆ—) ನೀನು ?—ಓ, ನಿನ್ನ ಹೆಸರು ಏನು ಹೇಳಲೇ ಇಲ್ವಲ್ಲ?

ಅಮಲ : ಅಮಲ ಅಂತ. ನೀವೆಲ್ಲ ಆಡಿ, ನಾನು ಇಲ್ಲೇ ನೋಡ್ತಾ ಕೂತ್ಕೋತೇನೆ.

(ಕೋಲಾಟ ನಡೆಯುತ್ತದೆ. ಅಮಲ ಉತ್ಸಾಹದಿಂದ ನೋಡುತ್ತಿದ್ದವನು ಕ್ರಮೇಣ ಸುಸ್ತಾಗಿ ಅಲ್ಲೇ ಮಲಗುತ್ತಾನೆ. ಕೋಲಾಟ ನಿಲ್ಲಿಸಿದ ಮೇಲೆ ಒಬ್ಬ ಹುಡುಗ ಕೋಲುಗಳನ್ನೆಲ್ಲ ಒಟ್ಟು ಮಾಡುತ್ತಾನೆ, ಎಲ್ಲರೂ ಮೇಲೆ ಬರುತ್ತಾರೆ.)

ಹುಡುಗಿ ೧ : ನಿದ್ದೆ ಬಂತಾ ?

ಹುಡುಗಿ ೨ : ಸುಸ್ತು ಆಯ್ತಾ ?

ಹುಡುಗಿ ೩ : ಪಾಪ, ಮೈಯಲ್ಲಿ ಚೆನ್ನಾಗಿಲ್ವಲ್ಲ........

ಹುಡುಗ ೧ : ನಿದ್ದೆ ಬಂದುಬಿಡ್ತಾ ?

ಅಮಲ : ಯಾಕೋ ಸುಸ್ತು, ಕೂರೋಕೇ ಆಗೋಲ್ಲ, ಬೆನ್ನು ನೊಯ್ತಾ ಇದೆ, ತಲೆ ಸುತ್ತುತಾ ಇದೆ, ಕಣ್ಣು ಮುಚ್ತಾ ಇದೆ........

(ಢಾಣ್........ಢಾಣ್........ಎಂದು ಗಂಟೆ ಬಾರಿಸುತ್ತದೆ.)

ಅಮಲ : ಓ, ಗಂಟೆ ! ನನ್ನ ಕರೀತಾ ಇದೆ, ಬಾ ಬಾ ಅಂತ—ಹೊಸಾ ದೇಶಕ್ಕೆ, ಎತ್ತರದ ಬೆಟ್ಟಕ್ಕೆ, ನೀಲಿ ಆಕಾಶಕ್ಕೆ........

ಹುಡುಗ ೨ : ನೀ ಈಗ ಮಲಕ್ಕೋ. ನಾವು ನಾಳೆ ಬೆಳಿಗ್ಗೆ ಮತ್ತೆ ಬರ್ತೀವೆ.

ಅಮಲ : ಆಯ್ತು....... ಇಲ್ನೋಡಿ, ನೀವು ಯಾವಾಗ್಩ೂ ಹೊರಗಡೇನೇ ಇರ್ತೀರಲ್ಲ, ಯಾರಿಗಾದ್ರೂ ರಾಜನ ಅಂಚೆ ಮನುಷ್ಯರು ಗೊತ್ತಾ ?

ಹುಡುಗ ೩ : ಗೊತ್ತು ಗೊತ್ತು.

ಹುಡುಗರು : ನಮಗೆಲ್ಲಾ ಗೊತ್ತು.

ಹುಡುಗಿ ೪ : ಎದೇ ಮೇಲೆ ಚಿನ್ನದ ಬಿಲ್ಲೆ ಸಿಕ್ಕಿಸಿಕೊಂಡು ತಿರುಗಾಡ್ತಾರಲ್ಲಾ....

ಅಮಲ : ಎಷ್ಟು ಜನ ಇದಾರೆ ಅವರು ?

ಹುಡುಗ ೪ : ತುಂಬಾ ಜನ ಇದಾರೆ ಅವರು, ಒಬ್ಬನ ಹೆಸರು ಮೇಘ ಅಂತ. ಒಬ್ಬನ ಹೆಸರು ಶರತ್ ಅಂತ....

ಅಮಲ : ನಂಗೆ ಏನಾದ್ರೂ ಕಾಗದ ಬಂದ್ರೆ, ಅವರೀಗೆ ನನ್ನ ಗುರುತು ಗೊತ್ತಾಗುತ್ತಾ ?

ಹುಡುಗ ೫ : ಗೊತ್ತಾಗದೇ ಏನು, ಕಾಗದದ ಮೇಲೆ ನಿನ್ನ ಹೆಸರು ಇರುತ್ತಲ್ಲ....

ಅಮಲ : ಬೆಳಿಗ್ಗೆ ನೀವು ಬರೋವಾಗ ಒಬ್ಬ ಅಂಚೆ ಮನುಷ್ಯನ್ನ ಕರಕೊಂಡು ಬಂದು ನಂಗೆ ಗುರ್ತುಮಾಡಿ ಕೊಡ್ತೀರಾ?

ಹುಡುಗ ೬ : ಹೋ!

ಹುಡುಗ ೧ : ಹೋಗ್ತೇವೆ ನಾವು.

[ಹೋಗ್ತೇವೆ, ಹೋಗ್ತೇವೆ—ಎನ್ನುತ್ತ ಎಲ್ಲರೂ ಓಡೋಡುತ್ತ ಹೋಗುವರು. ಮತ್ತೆ ಅಮಲ ಮಲಗುತ್ತಾನೆ. ರಸ್ತೆಯಲ್ಲಿ ಹಾಡು ಹೇಳುತ್ತ ಕುರುಡ ಛಿದಾಮ ದೊಣ್ಣೆ ಹಿಡಿದು ಪ್ರವೇಶಿಸುತ್ತಾನೆ. ಹಿಂದಿನಿಂದ ಒಬ್ಬ ಹುಡುಗ (ಗಣ್ಣ) ಓಡಿ ಬರುತ್ತಾನೆ.]

ಗಣ್ಣ : ಅಜ್ಜಾ........ಅಜ್ಜಾ........

ಛಿದಾಮ : (ಹಾಡು ನಿಲ್ಲಿಸಿ) ಯಾರೋ ಅದು?

ಗಣ್ಣ : ನಾನು, ಅಜ್ಜ.

ಛಿದಾಮ : ಏನು ಬಂದೆಯೋ?

ಗಣ್ಣ : ಅಮ್ಮ ಕಳಿಸಿದ್ಲು ಅಜ್ಜ, ನೀ ಒಬ್ನೇ ಬರ್‍ತಿದ್ದೆಯಲ್ಲಾ, ಕಣ್ಣು ಬೇರೆ ಕಾಣಿಸೋಲ್ಲ, ಎಲ್ಲಾದ್ರೂ ಬಿದ್ದುಬಿಟ್ರೆ ಅಂತ........

ಛಿದಾಮ : ಹುಚ್ಚ, ಯಾಕೆ ಬೀಳ್ತೇನೆ? ಕಣ್ಣು ಕುರುಡಾದ್ರೆ ಕಾಲು ಕುರುಡು ಅಂತ ತಿಳಕೊಂಡ್ಯಾ?

ಗಣ್ಣ : ಅಮ್ಮ ಹೇಳಿದ್ಲು ಅಜ್ಜ,—ಹೋಗು, ಕಣ್ಣು ಬೇರೆ ಕಾಣಿಸೋಲ್ಲ, ಎಲ್ಲಾದ್ರೂ ಬಿದ್ದು ಬಿಟ್ಟಾನು—ಅಂತ.

ಛಿದಾಮ : ಆಗ್ಲಿ, ಬಾ........ಮನೆ ಇಲ್ಲ ಮಠ ಇಲ್ಲ ಮಕ್ಕಳಿಲ್ಲ ಮರಿ ಇಲ್ಲ ಅಂತ ನಾನು ನಿರಂಬಳ ಇದ್ರೆ, ಈಗ ಊರೇ ನನ್ನ ಮನೆ ಆಗಿಬಿಟ್ಟಿದೆ. (ನಗುವನು)

ಗಣ್ಣ : ಕೈ ಹಿಡಕೊಳ್ಳಲಾ ಅಜ್ಜ?

ಛಿದಾಮ : ಬೇಡ, ನಾ ನಡೀತೇನೆ, ಗೊತ್ತಾಗುತ್ತೆ, ನೀ ಜೊತೆ ಬಾ, ಸಾಕು........ (ದೊಣ್ಣೆಯಲ್ಲಿ ತಡವುತ್ತ)—ಹಾಂ, ಇದೇ......ಇದೇ ಮಾಧವದತ್ತನ ಮನೆ ಕಟ್ಟೆ ಅಲ್ವಾ?

ಗಣ್ಣ : ಹೌದು ಅಜ್ಜ. ಇಲ್ಲಿ ಹೋಗ್ಬೇಕಾ?—ಏನು ಭಿಕ್ಷ ಕೇಳ್ತೀಯಾ?

ಛಿದಾಮು : ಹುಂ, ಭಿಕ್ಷಾನೇ ಅನ್ನು........ಗಣ್ಣ, ಬಾ, ಈ ಮನೇಲಿ ಒಂದು ಗಿಣಿ ಇದೆ........(ಕಟ್ಟೆಯ ಮೇಲೆ ಹತ್ತುತ್ತಿದ್ದಂತೆ ಅಮಲ ಎಚ್ಚರಗೊಳ್ಳು ತ್ತಾನೆ.)

ಅಮಲ : ಛಿದಾಮು........ಛಿದಾಮು........

ಛಿದಾಮು : ಹೂಂ. ನಿನ್ನ ನೋಡೋಕೆ ಬಂದೆ. ಹ್ಯಾಗಿದೀಯೆ ಇವತ್ತು?

ಅಮಲ : ಬಾ. ಸ್ವಲ್ಪ ಸುಸ್ತಾಗಿತ್ತು, ಈಗ ಸರಿಯಾಯ್ತು. ಬಾ, ಮೆಲ್ಲಗೆ ಬಾ, ಎಡವೀಯೆ........(ಛಿದಾಮು ಹತ್ತಿರ ಬರಲು) ಇವತ್ತು ನಂಗೆ ಒಂದು ಕುಣಿತ ಹೇಳ್ಕೊಡ್ತೀಯಾ?

ಛಿದಾಮು : ಕುಣಿತ ಹೇಳ್ಕೊಡಬೇಕಾ?—ಹುಂ, ಕುರುಡನ ಕುಣಿತ........

(ಛಿದಾಮು ಕೋಲು ಬದಿಗಿಟ್ಟು ಮೆಲ್ಲಗೆ ಹೆಜ್ಜೆ ಹಾಕತೊಡಗು ತ್ತಾನೆ. ಕ್ರಮೇಣ ಅಮಲ ಗಣ್ಣ ಕುಣಿತದಲ್ಲಿ ಸೇರಿಕೊಳ್ಳುತ್ತಾರೆ. ಕೆಲ ಹೊತ್ತು ಕುಣಿದ ಮೇಲೆ)

ಅಮಲ : (ದಣಿವಾಗಿ ಕೂತು) ಯಾಕೋ ದಣಿವಾಗ್ತಿದೆ, ನಿದ್ದೆ ಬರ್ತಾ ಇದೆ.

ಛಿದಾಮು : ಕುಣಿದು ಸುಸ್ತಾಗಿಬಿಟ್ಟೆ ಮಗಾ, ಮಲಕ್ಕೋ........ನಾ ಹೋಗ್ತೇನೆ, ನಾಳೆ ಬರ್ತೇನೆ ಮತ್ತೆ. (ಅಮಲನನ್ನು ಮೆಲ್ಲಗೆ ಮುಟ್ಟಿ ಮಲಗಿದ್ದು ನೋಡಿ, ಕೋಲೆತ್ತಿಕೊಂಡು ಹೊರಡುತ್ತಾನೆ. ಗಣ್ಣ ಅಮಲನನ್ನೆ ನೋಡುತ್ತ ನಿಂತಿದ್ದಾನೆ.) ಗಣ್ಣಾ........

ಗಣ್ಣ : (ಓಡಿ ಬರುತ್ತ) ಅಜ್ಜಾ........

ಛಿದಾಮು : ಬಾರಪ್ಪಾ ಹೋಗೋಣ........ನೋಡಿದೆಯಾ ಗಿಣೀನ........

(ಇಬ್ಬರೂ ನಿಷ್ಕ್ರಮಿಸುವರು)

(ರಂಗದಲ್ಲಿ ಕತ್ತಲೆ)

* * * *

(ಮತ್ತೆ ಬೆಳಕಾದಾಗ ಅದೇ ದೃಶ್ಯ, (ಆದರೆ ಪ್ರಾಯಃ ಕೆಲವು ದಿನ ಕಳೆದಿವೆ. ಅಮಲ ಹಾಗೇ ಮಲಗಿದ್ದಾನೆ. ಒಬ್ಬ ಆಳು ಸುತ್ತಲೂ ತೆರೆ ಕಟ್ಟಿ ಗಾಳಿ ಬೆಳಕು ಬರದಂತೆ ಮಾಡುತ್ತಿದ್ದಾನೆ. ಮಾಧವದತ್ತ ಅದನ್ನೇ ನೋಡುತ್ತ ನಿಂತಿದ್ದಾನೆ.)

ಮಾಧವದತ್ತ : ಮೆಲ್ಲಗೆ, ಮೆಲ್ಲಗೆ ಕಟ್ಟು. ಎಚ್ಚರಾಗಿಹೋದೀತು.

ಆಳು : ಯಜಮಾನ್ರೆ, ಬಾಬು ಏನಾದ್ರೂ ಎಚ್ಚರಾಗಿ ಈ ಕಟ್ಟಿರೋದನ್ನೆಲ್ಲ ನೋಡಿದ್ರೆ ಮಾತ್ರ, ಎದೆ ಒಡ್ಕೊಂಬಿಡ್ತಾನೆ!

ಮಾಧವದತ್ತ : (ತನ್ನಷ್ಟಕ್ಕೆ ಎನ್ನುವ ಹಾಗೆ) ಹುಂ, ಪಾಪ, ಗಾಳಿ ಬೆಳಕು ಗುಡ್ಡ ಬೆಟ್ಟ ಅಂತ ಬಾಯಿ ಬಿಡ್ತಿದೆ ಮಗು; ಆ ವೈದ್ಯನೋ ಗಾಳಿ ಬರಬಾರದು ಬೆಳಕು ಬರಬಾರದು ಅಂತ ಮೂರು ಹೊತ್ತೂ ಹೊಡ್ಕೋತಿರ್ತಾನೆ...... ದೇವರೇ, ಇಂಥ ಬಂಗಾರದಂಥ ಮಗು ತಂದ್ರೂ ಅದನ್ನ ಸುಖವಾಗಿ ಸಾಕಿಕೊಳ್ಳೋದು ನನ್ನ ಹಣೇಲಿ ಬರೀಲಿಲ್ಲಲ್ಲ......ಆಯ್ತೇನೋ ಕಟ್ಟ? ......ಸರಿಯಾಗಿ ಕಟ್ಟಿದೀಯಾ?...... (ಅದನ್ನೆಲ್ಲ ಪರೀಕ್ಷಿಸುತ್ತ ಹೊರಗೆ ಹೋಗುವನು.)

(ಅಮಲನಿಗೆ ಎಚ್ಚರವಾಗಿ ಅವ ಮೆಲ್ಲನೆ ಎದ್ದು ಸುತ್ತ ನೋಡುತ್ತಾನೆ. ಎದುರು ಪಂಜರ ಕಾಣುತ್ತದೆ. ಅದರ ಎದುರು ಹೋಗಿ ಅದನ್ನೇ ನೋಡುತ್ತ ನಿಲ್ಲುತ್ತಾನೆ. ಅಷ್ಟರಲ್ಲಿ ಹೊರಗಿನಿಂದ ಮಾಧವದತ್ತ ಬರುತ್ತಾನೆ.)

ಮಾಧವದತ್ತ : ಅಮಲ...

ಅಮಲ : ಇದೇನು ಮಾವ, ಕತ್ತಲಾಗಿಹೋಯ್ತು?

ಮಾಧವದತ್ತ : ಪಂಡಿತರು ಗಾಳಿ ಬೆಳಕು ಬರಬಾರ್ದು ಅಂತಾರೆ ಮಗು. ಅವರು ಹೇಳಿದ ಹಾಗೆ ಕೇಳದಿದ್ರೆ ನಿನಗೆ ಗುಣ ಆಗ್ಬೇಕಲ್ಲ.....

ಅಮಲ : ಹಾಗಾದ್ರೆ ಇವತ್ತು ಒಂದು ದಿನ ಇರಲಿ; ನಾಳೆ ಇವನ್ನೆಲ್ಲಾ ತೆಗೆಸಿ ಬಯಲು ಮಾಡಿಸಿಬಿಡ್ತೀಯಾ ಮಾವ?

ಮಾಧವದತ್ತ : ಆಗ್ಲಿ ಮಗು.

ಅಮಲ : ಮಾವ.........ಈ ಪಂಜರ, ರಾತ್ರಿಯೆಲ್ಲ ಅರಚುತ್ತಲ್ಲಾ ಯಾಕೆ ಮಾವ ?

ಮಾಧವದತ್ತ : ನಿನಗೇನೋ ಭ್ರಮೆ ಅಮಲ.

ಅಮಲ : ಇಲ್ಲ ಮಾವ......ರಾತ್ರಿ, ಎಲ್ಲ ಕತ್ತಲಾಗಿರೋವಾಗ, ಢಾಣ್....ಢಾಣ್ .......ಅಂತ ಗಂಟೆ ಹೊಡೆದದ್ದೇ, ಈ ಪಂಜರ ತೂಗಾಡೋಕೆ ಶುರು ಹಾಯ್ತು. ಅದಾದ ಮೇಲೆ ಅರಚೋಕೆ ಹಿಡೀತು, ಆ ದಿನ ಒಂದು ದೊಡ್ಡ ಕಾಮುಳ್ಳಿ ಹಕ್ಕಿ ರೆಕ್ಕೆ ಮುರ್ಕೊಂಡು ಇಲ್ಲಿ ಅಂಗಳದಲ್ಲಿ ಬಿದ್ದು ಅರಚ್ತಿತ್ತಲ್ಲ—ಹಾಗೆ !

ಮಾಧವದತ್ತ : ಹೇಳಿದ್ನಲ್ಲಾ ಮಗು, ನಿನಗೆ ಭ್ರಮೆ ; ಹಗಲೆಲ್ಲ ಹೀಗೆ ಕೂತಿರ್ತೀಯೆ, ಏನೇನೋ ಯೋಚ್ನೆ ಮಾಡ್ತಾ.......

ಅಮಲ : ಇಲ್ಲಿ ಕೂತರೆ ಚೆನ್ನಾಗಿರುತ್ತೆ ಮಾವ, ನೋವು ಕೂಡ ಹೋಗಿಬಿಡುತ್ತೆ.

ಮಾಧವದತ್ತ : ಇಲ್ಲಿ ಕೂತು ಇಡೀ ಊರಿನ ಹುಡುಗರು ಮುದುಕರು ಎಲ್ಲರ ಸ್ನೇಹ ಮಾಡ್ಕೊಂಡಿದೀಯೆ. ದಿನಾ ಮನೆ ಮುಂದೆ ಸಂತೆ ನೆರೆದ ಹಾಗೆ ಜನ ಸೇರ್ತಾರೆ. ಹಾಗೆ ಮಾತಾಡ್ತಾ ಕೂತರೆ ನಿಂಗೆ ಗುಣ ಆಗೋದು ಹ್ಯಾಗೆ ? ಒಳಗಾದ್ರೂ ಹೋಗಿ ಮಲಕ್ಕೋಬಾರದಾ ?

ಅಮಲ : ಇಲ್ಲ ಮಾವ, ನಾನು ಇಲ್ಲಿ ಇಲ್ದೆಹೋದ್ರೆ ಆ ಫಕೀರ ತಾತ ಬಂದೋನು, ನಾನು ಇಲ್ಲ ಅಂತ ತಿಳ್ಕೊಂಡು ಹೋಗಿಬಿಡ್ತಾನೆ.

ಮಾಧವದತ್ತ : ಯಾರು ಅವನು ಫಕೀರ ತಾತ ?

ಅಮಲ : ದಿನಾ ಬರ್ತಾನೆ, ನಿನಗೆ ಗೊತ್ತಿಲ್ವಾ? ದಿನಾ ಬಂದು ನನಗೆ ದೇಶ ದೇಶಾಂತರದ ಕಥೇನೆಲ್ಲ ಹೇಳ್ತಾನೆ.....ಇನ್ನೇನು ಬರೋ ಹೊತ್ತು......

(ಫಕೀರನ ವೇಷ ಧರಿಸಿದ ತಾತ ಬರುತ್ತಾನೆ.)

ಅಮಲ : ಇವನೇ ಮಾವ, ಫಕೀರ ತಾತ. ನಿಂಗೆ ಗೊತ್ತಿಲ್ವಾ ?

ಮಾಧವದತ್ತ : ಇವನು !

ತಾತ : (ಮಾಧವದತ್ತನಿಗೆ ಸನ್ನೆ ಮಾಡಿ) ಹೌದಪ್ಪ, ನಾನೇ ಫಕೀರ......

ಅಮಲ : ಬಾ, ತಾತ......ಬಾ, ಇಲ್ಲೇ ಕೂತ್ಕೋ.......ಈ ಸಲ ಎಲ್ಲಿಗೆ, ಹೋಗಿದ್ದೆ ತಾತ ?

ತಾತ : ಕ್ರೌಂಚದ್ವೀಪಕ್ಕೆ ಹೋಗಿದ್ದೆನಪ್ಪಾ. ಅಲ್ಲಿಂದ್ಲೇ ಈಗ ಬರ್‍ತಿರೋದು.

ಮಾಧವದತ್ತ : ಏನು, ಕ್ರೌಂಚದ್ವೀಪಕ್ಕೆ ?

ತಾತ : (ಮಾಧವನಿಗೆ) ಯಾಕೆ, ಆಶ್ಚರ್ಯವಾ—ಈ ಭಿಕಾರಿ ಮುದುಕ ಹ್ಯಾಗೆ ಅಷ್ಟು ದೂರ ಹೋಗಿ ಬಂದ ಅಂತ ? ನಂಗೇನು ವಾಹನ ಬೇಡ, ತಿಂಗಳು ಗಟ್ಟಲೆ ಪ್ರಯಾಣ ಮಾಡೋ ರಗಳೆ ಇಲ್ಲ. ನನ್ನ ಮಂತ್ರದ ಕಂಬಳಿ ಕಂಕುಳಲ್ಲಿಟ್ಟುಕೊಂಡೆ ಅಂದರೆ ಆಯ್ತು, ಎಲ್ಲಿಗೆ ಬೇಕಂದ್ರೆ ಅಲ್ಲಿಗೆ, ಕಣ್ಣು ಮುಚ್ಚಿ ಒಡೆಯೋದ್ರಲ್ಲಿ ಹೋಗಿರ್‍ತೇನೆ.

ಅಮಲ : ತಾತ, ತಾತ......ನಂಗೆ ಗುಣ ಆದ್ಮೇಲೆ ಆ ಮಂತ್ರ ಎಲ್ಲಾ ನಂಗೆ ಕಲಿಸ್ಬೇಕು, ನಾನು ಹಿಂದೇ ಹೇಳಿದೇನೆ—ನೆನಪಿದೆಯಾ ?

ತಾತ : ಓ, ನಿಂಗಲ್ಲದೆ ಮತ್ಯಾರಿಗೆ ಕಲಿಸಲಿ ಮಗು ? ಗುಡ್ಡ-ಬೆಟ್ಟ, ಸಮುದ್ರ-ನದಿ, ಅಡವಿ-ಬಯಲು—ಎಲ್ಲಂದರಲ್ಲಿ ತಿರುಗಾಡೋ ಮಂತ್ರ ಕಲಿಸ್ತೇನೆ.

ಮಾಧವದತ್ತ : ಏನು ನಿಮುಗೆಲ್ಲರಿಗೂ ಹುಚ್ಚು ಹಿಡಿದು ಹೋಯ್ತಾ ?

ಅಮಲ : ಕ್ರೌಂಚ ದ್ವೀಪ ಹೇಗಿದೆ ತಾತ, ಹೇಳು ನೋಡೋಣ ?

ತಾತ : ಓ, ಅದು ವಿಚಿತ್ರವಾದ ಸ್ಥಳ ಮಗೂ........ಹಕ್ಕಿಗಳ ರಾಜ್ಯ ಅದು ; ಅಲ್ಲಿ ಮನುಷ್ಯರೇ ಇಲ್ಲ, ಇರೋದೆಲ್ಲಾ ಹಕ್ಕಿಗಳೇ. ಯಾ ಹೊತ್ತಿಗೆ ನೋಡಿದ್ರೂ ಅಲ್ಲಿ ಹಕ್ಕಿಗಳು ಹಾಡ್ತಾ ಕುಣೀತಾ ಇರ್‍ತವೆ.

ಅಮಲ : ಓ, ಎಷ್ಟು ಚಂದ ಇರಬಹುದು !........ತಾತ, ಅದು ಸಮುದ್ರದ ದಂಡೇಲಿ ಇರೋದಲ್ವಾ ?

ತಾತ : ಹುಂ, ಸಮುದ್ರದ ದಂಡೇಲೇ ಇರೋದು.

ಅಮಲ : ಅಲ್ಲಿ, ಗುಡ್ಡಗಳೆಲ್ಲ ನೀಲಿ ಬಣ್ಣ ಅಲ್ವಾ ತಾತ ?

ತಾತ : ಹೌದ್ಹೌದು. ಗುಡ್ಡ ಎಲ್ಲ ನೀಲಿ. ಅದರ ಮೇಲೆ ಸೂರ್ಯನ ಕಿರಣ ಹಾಸಿತು ಅಂದ್ರೆ ಓಕುಳಿ ಆಡೋ ಹಾಗೆ ಕಾಣುತ್ತೆ.

ಅಮಲ : ಆ ಗುಡ್ಡದ ಮೇಲೆ ಪುಟ್ಟ ಪುಟ್ಟ ಹಳ್ಳಗಳಿವೆಯಾ ?

ತಾತ : ಇಲ್ಲದೆ ಉಂಟೆ ? ಜುಳು ಜುಳು ಜುಳು ಹರೀತಿರ್‍ತಾವೆ.

ಅಮಲ : ಅಲ್ಲಿ ನೀನು ಏನು ಮಾಡಿದೆ ತಾತ ?

ತಾತ : ಹಕ್ಕಿಗಳ ಜೊತೆ ಕುಣಿದೆ, ಹಳ್ಳದ ಜೊತೆ ಮಾತಾಡಿದೆ. ಒಂದು ಬಂಡೆ

ಹತ್ತಿರ ಹೋದೆ ; ಅದು ಒಂದು ಚಂದ ಕಥೆ ಹೇಳಿತು.

ಅಮಲ : ನಂಗೆ ಹೇಳೋಲ್ವಾ ಆ ಕತೆ ?

ತಾತ : ನಿಂಗೆ ಹೇಳೋಕೆ ಅಂತಲೇ ಕೇಳಿಕೊಂಡು ಬಂದದ್ದು ಅದು ; ಉದ್ದ ಕತೆ, ಆಮೇಲೆ ಹೇಳ್ತೇನೆ.

ಅಮಲ : ಅಲ್ಲಿ ಊಟ ತಿಂಡಿಗೆ ಏನು ಮಾಡಿದೆ ?

ತಾತ : ಅಯ್ಯೋ, ಸಮೃದ್ಧಿ ! ಅಲ್ಲಿ ತಿಂದಿದ್ದು ಇನ್ನೂ ಅರಗಿಲ್ಲ ನಂಗೆ. ಆ ಹಕ್ಕಿ : ಗಳು, ಸಾಲು ಸಾಲೇ ಬಂದು ಏನೇನೋ ಹಣ್ಣೆಲ್ಲ ತಂದ್ಕೊಟ್ಟವು. ಎಷ್ಟು ರುಚಿ ಅಂತಿಯಾ !

ಮಾಧವದತ್ತ : ನಿಮಗಂತೂ ಹುಚ್ಚು ; ಇನ್ನು ನನಗೂ ಹುಚ್ಚು ಹಿಡಿಸ್ಬಿಡ್ತೀರಾ ಅಷ್ಟೆ !

ಅಮಲ : ಮಾವ, ಆ ಮೊಸರಿನವನು ಬಂದು ಹೋದನಾ ?

ಮಾಧವದತ್ತ : ಓ, ಆಗಲೇ ಹೋದ. ಈ ನಿನ್ನ ಫಕೀರನೀಗೆ ಕ್ರೌಂಚದ್ವೀಪದಲ್ಲಿ ಹಕ್ಕಿಗಳು ತಿನ್ನೋಕೆ ಕೊಡ್ತವೆ ಅಂದ್ರೆ, ಅವನು ಮೊಸರು ಮಾರಿಯೇ ಹೊಟ್ಟೆ ತುಂಬಿಸ್ಕೋಬೇಕಲ್ಲ.........ಅವನು ನಿನಗೇ ಅಂತ ಒಂದು ಬಟ್ಟಲು ಮೊಸರು ತೆಗೆದಿಟ್ಟು ಹೋಗಿದಾನೆ. ಅವರ ಹಳ್ಳೀಲಿ, ಅವನ ತಂಗೀ ಮಗಳಿಗೆ ಮದುವೇನಂತೆ ; ಓಲಗದವರಿಗೆ ಹೇಳ್ಬೇಕಂತೆ— ಅದಕ್ಕೇ ಬೇಗ ಹೋದ.

ಅಮಲ : ಅವಳನ್ನ ನಂಗೆ ಕೊಟ್ಟು ಮದುವೆ ಮಾಡಿಸ್ತೇನೆ ಅಂದಿದ್ನಲ್ಲಾ......

ತಾತ : ಹೌದಾ ? ಮೋಸ ಮಾಡಿಬಿಟ್ಟನಾ ?

ಅಮಲ : ಇಲ್ಲ ತಾತ, ಅವನು ಸುಳ್ಳು ಹೇಳೋದಿಲ್ಲ. ಈ ಸುದ್ದೀನೇ ಸುಳ್ಳಾಗಿರಬೇಕು.

ಮಾಧವದತ್ತ : ಆಯ್ತು ಬಿಡಿ, ನಾನು ಕೇಳಲಾರೆ. ಇನ್ನೊಂದು ಕ್ಷಣ ಇಲ್ಲಿದ್ರೆ ನನಗೆ ಹುಚ್ಚು ಹಿಡಿಯುತ್ತೆ.......(ಹೋಗುವನು.)

ಅಮಲ : ಮಾವ ಹೋಗಿಬಿಟ್ಟ ತಾತ, ಈಗಲಾದ್ರೂ ನನ್ನ ಕಿವೀಲಿ ಹೇಳು, ಮೆಲ್ಲಗೆ,—ರಾಜನಿಂದ ನನ್ನ ಹೆಸರಿಗೆ ಏನಾದ್ರೂ ಕಾಗದ ಬಂತಾ ?

ತಾತ : ಬರುತ್ತೆ ಮಗು, ಅದಕ್ಕೆ ಯಾಕೆ ಆತುರ ? ಬಂದೇ ಬರುತ್ತೆ. ಇವತ್ತು ನಾಳೇನೇ ಬಂದ್ರೂ ಬರಬಹುದು, ಸ್ವಲ್ಪ ತಡವಾದರೂ ಆಗಬಹುದು....

ಅಮಲ : ತಡವಾಗೋಲ್ಲ, ಇವತ್ತು ನಾಳೀನೇ ಬರುತ್ತೆ ತಾತ. ಇನ್ನೇನು ಬಂದ್ಬಿಡುತ್ತೆ.......ರಾಜನ ಅಂಚೆಯೋನು ಎದೇಗೆ ಬಿಲ್ಲೆ ಸಿಕ್ಕಿಸ್ಕೊಂಡು, ರಾತ್ರಿ ಕತ್ತಲೇಲಿ, ಆ ಬೆಟ್ಟದ ಅಂಕುಡೊಂಕು ದಾರೀಲಿ, ಕೈಯಲ್ಲಿ ಲಾಟೀನು ಹಿಡ್ಕೊಂಡು ಇಳಿದಿಳಿದು ಬರ್‍ತಾನೆ; ಅವನ ಹೆಗಲಲ್ಲಿ ಕಾಗದ ತುಂಬಿದ ಚೀಲ ಇರುತ್ತೆ; ಅವನ ಹಿಂದೆ ಜೂಲುನಾಯಿ ಓಡಿ ಬರ್‍ತಾ ಇರುತ್ತೆ ........ಇನ್ನೇನು ಬಂದುಬಿಡ್ತಾನೆ ತಾತ!........ಓ, ಎಷ್ಟು ಖುಶಿ ಆಗ್ತಿದೆ!

ತಾತ : ರಾಜ ತುಂಬ ಒಳ್ಳೆಯೋನು ಮಗು.

ಅಮಲ : ಹೌದಂತೆ. ಆದ್ರೆ, ಯಾರೂ ಅವನನ್ನ ನೋಡಿಯೇ ಇಲ್ವಂತಲ್ಲ, ಅವನು ಯಾರಿಗೂ ಕಾಣಿಸ್ಕೊಳ್ಳೋದೆ ಇಲ್ಲಂತೆ............ನೀನು ನೋಡಿದೀಯಾ ತಾತ?

ತಾತ : ನೋಡಿಲ್ಲಪ್ಪ, ನೋಡ್ಬೇಕು.

ಅಮಲ : ಹುಷಾರಾದ ಮೇಲೆ ನಾನು ಒಂದು ದಿನ ಹೋಗಿ ಅವನನ್ನ ನೋಡ್ಬೇಕು. ಆ ಭಿದಾಮುನ ಜತೆ ಭಿಕ್ಷ ಬೇಡಿಕೋತ ಹೋಗ್ತೇನೆ.

ತಾತ : ಯಾರು ಭಿದಾಮು?

ಅಮಲ : ನೀನು ನೋಡಿಲ್ವಾ? ದಿನಾ ಇಲ್ಲಿ ಬರ್‍ತಾನೆ. ಒಳ್ಳೇ ಹಾಡು ಹೇಳ್ತಾನೆ, ಚಂದ ಕುಣೀತಾನೆ ಪಾಪ, ಅವನಿಗೆ ಕಾಣಿಸೋಲ್ಲ.

ತಾತ : ತುಂಬಾ ಜನ ಸ್ನೇಹ ಮಾಡ್ಕೊಡುಂಬಿಟ್ಟಿದೀಯಾ ನೀನು.

ಅಮಲ : ಹುಂ, ತಾತ. ಈಗ ಇಲ್ಲಿ ಕೂತಿರೋಕೆ ನಂಗೆ ಬೇಜಾರೇ ಆಗೋಲ್ಲ. ಮೊದ್ಲು ಬಹಳ ಬೇಜಾರಾಗ್ತಿತ್ತು. ಈಗ, ರಾಜ ಕಟ್ಟಿಸಿದ ಅಂಚೆಮನೆ ನೋಡ್ತಾ ಕೂತಿರ್‍ತೇನೆ. ಮತ್ತೆ, ನೀನು, ಭಿದಾಮು, ಮೊಸರಿನೋನು, ಸುಧಾ— ಎಲ್ಲಾ ಬರ್‍ತೀರಿ. ಹೊತ್ತು ಹೋದ್ದೇ ತಿಳಿಯೋದಿಲ್ಲ.

ಮಾಧವದತ್ತ : (ಪ್ರವೇಶಿಸುತ್ತ) ಅಂತೂ ನೀವು ನನ್ನ ತಲೇಗೇ ತಂದಿಡ್ತೀರಿ!

ತಾತ : ಏನಾಯ್ತಪ್ಪ?

ಮಾಧವದತ್ತ : ಈ ಅಮಲನಿಗೆ ಕಾಗದ ಬರೆಯೋಕೆ ಅಂತ್ಲೇ ರಾಜ ಇಲ್ಲಿ ಅಂಚೆಮನೆ ಕಟ್ಟಿಸಿದಾನೆ ಅಂತೆ ಎಲ್ಲರ ಎದುರಿಗೂ ನೀವು ಹೇಳ್ತೀರಂತೆ........

ತಾತ : ಅದರಿಂದ ಏನಾಯ್ತು?

ಮಾಧವದತ್ತ : ನಮ್ಮ ಊರಿನ ಪಂಚಾನನ ಮುಖಂಡ ಇದ್ದಾನಲ್ಲ, ಅವನು ಇದನ್ನ ರಾಜನ ಕಿವೀಗೆ ಮುಟ್ಟೋ ಹಾಗೆ ಮಾಡಿದಾನಂತೆ. ಇನ್ನೇನು ರಾಜ ಭಟರು ಬರ್‍ತಾರೆ, ನನ್ನ ಹಿಡ್ಕೊಂಡು ಹೋಗೋಕೆ.

ಅಮಲ : ಬಂದ್ರೆ ನನ್ನ ಕಳಿಸು ಮಾವ, ನಾನು ಹೋಗ್ತೇನೆ ರಾಜನ ಹತ್ತಿರ.

ಮಾಧವದತ್ತ : ಸುಮ್ಮಿರು ಅಮಲ, ನಿಂಗೆ ತಿಳಿಯೋಲ್ಲ.

ತಾತ : ಮಕ್ಕಳ ಮೇಲೆ ಸಿಟ್ಟು ಮಾಡೋನು ರಾಜ ಅಲ್ಲ—ಸುಮ್ಮನೇ ನೀ ಯಾಕೆ ಹೆದರಿಕೋತೀಯೆ ?

[ವೈದ್ಯ ಮಾಣಿಯ ಜೊತೆ ಪ್ರವೇಶಿಸುವನು]

ಮಾಧವದತ್ತ : ಬನ್ನಿ ವೈದ್ಯರೆ.

ವೈದ್ಯ : ಮಾಣಿ........

ಮಾಣಿ : ಗುರುಗಳೆ........

ವೈದ್ಯ : ಬಂದೆಯಾ........

ಮಾಣಿ : ಬಂದೆ ಗುರುಗಳೆ........

ವೈದ್ಯ : (ಮಾಧವದತ್ತನಿಗೆ) ಇವತ್ತಿನ ಸ್ಥಿತಿ ಯಾವ ಪ್ರಕಾರ ಇದೆ ?

ಅಮಲ : ಚೆನ್ನಾಗಿದೇನೆ ವೈದ್ಯರೆ, ಗುಣ ಆದ ಹಾಗೆ ಅನ್ನಿಸತ್ತೆ ಇವತ್ತು.

ವೈದ್ಯ : (ಅಮಲನನ್ನು ದೃಷ್ಟಿಸಿ ನೋಡಿ, ಅನಂತರ ಮಾಧವದತ್ತನನ್ನು ಪಕ್ಕಕ್ಕೆ ಕರೆದು) ಇಕೋ, ಇದು ಒಳ್ಳೇ ಸೂಚನೆ ಅಲ್ಲ. ಹುಡುಗ ಲಘುವಾಗಿ ಬಿಟ್ಟಿದಾನೆ...........ಒಳ್ಳೇ ಸೂಚನೆ ಅಲ್ಲ, ನಿಜವಾಗಿ ಕಠಿಣ ಪರಿಸ್ಥಿತಿ. ಇಕೋ, ಚಕ್ರಧರ ಹೇಳ್ತಾನೆ........

ಮಾಧವದತ್ತ : ವೈದ್ಯರೆ, ಇನ್ನು ಮಾತ್ರ ಆ ನಿಮ್ಮ ಚ್ಯವನ ಚಕ್ರ ಇವರ ಸುದ್ದಿ ಎತ್ತ ಬೇಡಿ ! ನನಗೆ ತಲೆ ರೋಷ ಹಿಡಿದು ಹೋಗುತ್ತೆ.

ವೈದ್ಯ : ಅಲ್ಲಪ್ಪಾ, ಇವನಿಗೆ ಹೊರಗಿನ ಗಾಳಿ—ಬಹಿರ್ವಾತ—ತಗಲಿಬಿಟ್ಟಿದೆ. ಅದಕ್ಕೇ ನಾನು ಕಠಿಣ ಅಂತಿರೋದು.

ಮಾಧವದತ್ತ : ಒಟ್ಟಿನಲ್ಲಿ ನನಗೆ ಋಣ ಇಲ್ಲ, ವೈದ್ಯರೆ. ನೀವು ತಾನೇ ಏನು ಮಾಡ್ತೀರಿ ! ಆ ಆಡಿಕೊಂಡಿದ್ದ ಹುಡುಗನ್ನ ಈ ನನ್ನ ಹಾಳು ಮನೇಗೆ ತಂದದ್ದೇ ತಪ್ಪಾಯ್ತು. ಅಲ್ಲೇ ಇದ್ದಿದ್ರೆ ಸುಖವಾಗೇ ಇರ್‍ತಿದ್ದನೋ ಏನೋ. ಆ

ಗಿಳೀ ತಂದು ಸಾಕಿದ ಹಾಗೇ ಆಯ್ತು, ನನ್ನ ಹಣೇ ಬರಹ.

ವೈದ್ಯ : (ರಸ್ತೇಕಡೆ ನೋಡಿ) ಎಲಾ, ಪಂಚಾನನ ಮುಖಂಡ !........ಇವನ್ಯಾಕಪ್ಪ ಇಲ್ಲಿಗೇ ಬರ್‍ತಿದಾನೆ !........ಗ್ರಹಚಾರ ವಕ್ರಿಸಿತು........ಮಾಧವದತ್ತ, ನಾನು ಬೆಳಿಗ್ಗೆ ಬಂದು ನೋಡಿ ಔಷಧ ಕೊಡ್ತೇನೆ, ಈಗ ಸ್ವಲ್ಪ ಕೆಲಸ ಇದೆ........ಬರ್‍ತೇನೆ........(ಹೊರಡುವನು.)

ಮಾಧವದತ್ತ : ಆಗಲಿ ವೈದ್ಯರೆ. (ಒಳಗೆ ಹೋಗುವನು.)

ವೈದ್ಯ : (ಮುಂದೆ ಹೋದವನು ತಿರುಗಿ) ಮಾಣಿ........

ಮಾಣಿ : (ಹಾರಿ ಓಡುತ್ತ) ಗುರುಗಳೇ........

ವೈದ್ಯ : ಬಾ ಬೇಗ........ನೀನೊಬ್ಬ ಮುಠ್ಠಾಳ....

[ವೈದ್ಯ, ಮಾಣಿ ನಿಷ್ಕ್ರಮಿಸುವರು. ಕೊಡೆ ಹಿಡಿಸಿಕೊಂಡು ಪಂಚಾನನ ಮುಖಂಡ ಪ್ರವೇಶಿಸುತ್ತಾನೆ.]

ಮುಖಂಡ : (ಅಮಲನ ಕಡೆ ಬರುತ್ತ) ಏಯ್ ಹುಡುಗ........

ತಾತ : ಷ್, ಗಲಾಟೆ ಮಾಡ್ಬೇಡಿ......

ಅಮಲ : (ಕಣ್ಣು ಮುಚ್ಚಿದ್ದವನು ತೆರೆಯುತ್ತ) ಇಲ್ಲ ತಾತ, ನಂಗೆ ನಿದ್ದೆ ಬಂದಿದೆ ಅಂತ ತಿಳ್ಕೊಂಡೆಯಾ ? ಇಲ್ಲ, ನಂಗೆ ಎಲ್ಲಾ ಮಾತೂ ಕೇಳ್ತಾ ಇದೇ ದೂರದೂರದ ಮಾತುಗಳೂ ಕೇಳ್ತಾ ಇವೆ........ನನ್ನ ಅಪ್ಪ ಅಮ್ಮ ಮಾತಾಡ್ತಿರೋದು, ಹಳ್ಳೀಲಿ ಹಲಸಿನ ಮರದ ಮೇಲೆ ಹುರುಳಿ ಹಕ್ಕಿ ಅರಚ್ತಾ ಇರೋದು ...ಎಲ್ಲಾ

[ಮಾಧವದತ್ತ ಒಳಗಿಂದ ಬರುವನು.]

ಮುಖಂಡ : ಏನಯ್ಯಾ ಮಾಧವದತ್ತ, ಈಚೀಚೆ ಬಹಳ ದೊಡ್ಡ ಮನುಷ್ಯ ಆಗಿಬಿಟ್ಟೆ ಅಲ್ವಾ ನೀನು ?

ಮಾಧವದತ್ತ : ಇದೇನು ಹೇಳ್ತೀರಿ ಮುಖಂಡರೆ ? ನಮ್ಮನ್ನು ಯಾಕೆ ಹಾಸ್ಯ ಮಾಡ್ತೀರಿ ? ನಾವು ಸಾಮಾನ್ಯ ಜನರು.

ಮುಖಂಡ : ನಿಮ್ಮ ಹುಡುಗ ರಾಜನ ಕಾಗದಕ್ಕೆ ಕಾಯ್ತಾ ಇದಾನಂತೆ !

ಮಾಧವದತ್ತ : ಹುಡುಗ, ಏನೂ ಅರಿಯದ ಮಗು........

ಮುಖಂಡ : ನಂಗೆಲ್ಲಾ ತಿಳಿಯುತ್ತೆ ನಿನ್ನ ಆಟ ! ಅಂತೂ ರಾಜನ ಬುಡಬುಡಕ್ಕೇ

ಹೋಗಿಬಿಟ್ಟೆ ಅನ್ನು.......ಏಯ್ ಹುಡುಗಾ, ಆಂಚೆಮನೆ ನಿನಗೆ ಅಂತ್ಲೇ ಕಟ್ಟಿಸಿದ್ದುರಾಜ........ನಿನ್ನ ಹೆಸರೀಗೆ ಕಾಗದ ಬರ್‍ದಿದಾನೆ ನೋಡು ರಾಜ !

ಅಮಲ : ಹೌದಾ, ನಿಜವಾಗಿ ?

ಮುಖಂಡ : ನಿಂಗೂ ರಾಜಂಗೂ ಭಾರೀ ಸ್ನೇಹ ಅಲ್ವಾ ? (ಒಂದು ಖಾಲಿ ಬಿಳಿ ಹಾಳೆ ತೆಗೆದು ಕೊಡುತ್ತ) ಕಾಗದ ಬರ್‍ದಿದಾನೆ ತಗೋ ರಾಜ........

ಅಮಲ : ಅಥವಾ ತಮಾಷೆ ಮಾಡ್ತಿದೀರಾ ?........ತಾತ, ನಿಜವಾಗಿ ಹೇಳು, ಇದು ರಾಜನಿಂದ ಬಂದ ಕಾಗದ ಹೌದಾ ?

ತಾತ : ಹೌದು ಮಗು, ಸುಳ್ಳಲ್ಲ.

ಅಮಲ : (ನೋಡುತ್ತ) ಆದ್ರೆ, ನಂಗೆ ಅಕ್ಷರಗಳೇ ಕಾಣೋದಿಲ್ವಲ್ಲ ? ಬರೀ ಬಿಳೀ ಹಾಳೆ ಮಾತ್ರ........ಮುಖಂಡರೆ, ಕಾಗದದಲ್ಲಿ ಏನು ಬರೆದಿದೆ, ಹೇಳಿ.

ಮುಖಂಡ : ಇನ್ನು ಎರಡು ದಿನಗಳಲ್ಲಿ ರಾಜ ನಿಮ್ಮ ಮನೇಗೆ ಬರ್‍ತಾನಂತೆ. ತಿಂಡಿ ಮಾಡಿ ಇಡ್ಬೇಕಂತೆ. ನಿನ್ನ ನೋಡ್ಬೇಕು ಅಂತ ಅನಿಸಿ, ಈಗ ಅವನೀಗೆ ಅರಮನೇಲಿ ಇರೋಕೆ ಮನಸ್ಸೇ ಆಗ್ತಾ ಇಲ್ವಂತೆ !....ಹಹ್ಹಹ್ಹಹ್ಹಹ್ಹ...

ಮಾಧವದತ್ತ : (ಕೈಮುಗಿದು) ಮುಖಂಡರೆ, ನಮ್ಮಂಥ ಸಾಮಾನ್ಯರ ಮೇಲೆ ಸ್ವಲ್ಪ ದಯ ಇರಲಿ. ಯಾಕೆ ಹೀಗೆ ಹಾಸ್ಯ ಮಾಡ್ತೀರಿ ?

ತಾತ : ಹಾಸ್ಯವೆ ? ಹಾಸ್ಯ ಮಾಡೋ ಶಕ್ತಿ ಇವನಿಗೆಲ್ಲಿಂದ ಬರುತ್ತಪ್ಪಾ ?

ಮಾಧವದತ್ತ : ತಾತ, ನಿಂಗೂ ಹುಚ್ಚು ಹಿಡೀತಾ ? ಒಟ್ಟಿನಲ್ಲಿ, ಇನ್ನು ನಾನು ಈ ಊರಲ್ಲಿರಬಾರದು....

ತಾತ : ಹುಚ್ಚು ಹಿಡಿದಿದೆ ಅಂತ್ಲೇ ತಿಳಕೋ. ಅದಕ್ಕೇ ಇರಬಹ್ದು, ನನಗೆ ಈ ಕಾಗದದ ತುಂಬ ಅಕ್ಷರಗಳು ಕಾಣ್ತಿವೆ. ಇದು ರಾಜಂದೇ ಕಾಗದ. ಅಮಲನೀಗೇ ಬರೆದದ್ದು. ತಾನೇ ರಾಜವೈದ್ಯನ್ನ ಕರಕೊಂಡು ಬರ್‍ತೀನಿ ಅಂತ ಬರೆದಿದಾನೆ ರಾಜ. ನನ್ನ ಕಣ್ಣಿಗೆ ಸ್ಪಷ್ಟ ಕಾಣ್ತಾ ಇದೆ.

ಅಮಲ : ಕೇಳು ತಾತ, ವಾದ್ಯಗಳು. ರಾಜನ ವಾದ್ಯಗಳೇ ಅಲ್ವಾ ?......... ಹೌದು. ರಾಜವಾದ್ಯಗಳು ಮೊಳಗ್ತಾ ಇವೆ.

ಮುಖಂಡ : ಹ ಹ್ಹ ಹ್ಹ ಹ್ಹ ಹ್ಹ ! ಫಕೀರನಿಗಿನ್ನೂ ಕೆಳ್ತಾ ಇಲ್ಲ. ಇನ್ನೊಂದು ಕೊಂಚ ಏರಬೇಕು ತಲೇಗೆ—ಆಗ ಕೇಳಿಸುತ್ತೆ, ರಾಜವಾದ್ಯ.

ಅಮಲ : ಮುಖಂಡರೆ, ನಿಮಗೆ ನನ್ನ ಮೇಲೆ ಸಿಟ್ಟು ಅಂತ ತಿಳ್ಕೊಂಡಿದ್ದೆ. ನೀವು ನನ್ನ ಪ್ರೀತಿಸೋಲ್ಲ ಅಂತ ತಿಳ್ಕೊಂಡಿದ್ದೆ. ನೀವು ನಿಜವಾಗ್ಲೂ ರಾಜನ ಕಾಗದ ತರ್ತೀರಿ ಅಂತ ತಿಳಿದಿರಲಿಲ್ಲ. ಎಷ್ಟು ಒಳ್ಳೇರು ನೀವು ! ಎಲ್ಲಿ, ನಿಮ್ಮ ಪಾದದೂಳಿ ಕೊಡಿ ನಂಗೆ........

ಮುಖಂಡ : ಈ ಹುಡುಗನಲ್ಲಿ ಶ್ರದ್ಧೆ ಭಕ್ತಿಗಳು ಇವೆ ಅಂತ ಒಪ್ಪಲೇ ಬೇಕು ! ಬುದ್ಧಿ ಇಲ್ದೇ ಇರಬಹುದು, ಆದ್ರೆ ಮನಸ್ಸು ಮಾತ್ರ ತುಂಬ ಒಳ್ಳೇದು.

ಅಮಲ : ತುಂಬ ಸೆಖೆ ಅಲ್ವಾ ತಾತ ?........ಆಕಾಶದಲ್ಲಿ ಮದುವಣಗಿತ್ತಿ ನಕ್ಷತ್ರ ಮೂಡಿದೆಯಾ ತಾತ ? ನಂಗೆ ಏನೂ ಕಾಣಿಸೋದೇ ಇಲ್ಲ.

ತಾತ : ಇಲ್ಲಿ ಸುತ್ತ ತೆರೆ ಕಟ್ಟಬಿಟ್ಟದಾರೆ ಮಗು. ನಿಲ್ಲು, ನಾನೇ ಎಲ್ಲ ಕಿತ್ತು ಹಾಕ್ತೇನೆ........(ಹೊರಡುವನು)

ಅಮಲ : ಕಾಗದ ಎಲ್ಲಿಟ್ಟೆ ತಾತ ?

ತಾತ : ಇಲ್ಲಿದೆ ಮಗು, ಬೇಕಾ ?

ಅಮಲ : ಬೇಡ, ಸುಮ್ಮನೆ ಕೇಳಿದೆ........ರಾಜನೇ ಬರ್‍ತಾನಲ್ಲ, ಇನ್ನು ಕಾಗದ ಯಾಕೆ ? ರಾಜ ಬರೋತನಕ ಕಾಗದ ಬೇಕು, ಕಾಗದಕ್ಕಾಗಿ ಅಂಚೆಮನೆ ಬೇಕು. ಇನ್ನು ಕಾಗದಾನೂ ಬೇಡ, ಅಂಚೆಮನೇನೂ ಬೇಡ ನಂಗೆ— ರಾಜನೇ ಬಂದುಬಿಡ್ತಾನೆ !

(ಹೊರಗೆ ರಾಜವಾದ್ಯಗಳ ಸದ್ದು)

ಮಾಧವದತ್ತ : ಯಾರು ?........ಯಾರಿರಬಹುದು ?

ಮುಖಂಡ : (ಏರು ದನಿಯಲ್ಲಿ) ಯಾರೋ ಅದು ? ಯಾರದ್ದು ವಾದ್ಯ ? ಇಲ್ಲಿ ಯಾರಿದ್ದಾರೆ ಅಂತ ತಿಳಿದಿದ್ದೀರಿ ? ಪಂಚಾನನ ಮುಖಂಡ, ತಿಳೀತಾ ?........(ವಾದ್ಯ ನಿಲ್ಲುತ್ತದೆ) ನೋಡಿದೆಯಾ, ಒಂದು ಸಲ ಗರ್ಜಿಸಿದ್ದಕ್ಕೆ ಸದ್ದೇ ಅಡಗಿಹೋಯ್ತು ! ಪಂಚಾನನ ಅನ್ನೋ ಹೆಸರು ಕೇಳಿದರೇ ಸಾಕು, ಎಲ್ರೂ ತಲ್ಲಣಿಸಿ ಹೋಗ್ತಾರೆ !........ಈ ಊರಲ್ಲಿ ನನ್ನ ಅಪ್ಪಣೆ ಇಲ್ದೆ ವಾದ್ಯ ಬಾರಿಸೋದು ಅಂದ್ರೇನು !........

ಮಾಧವದತ್ತ : ಯಾರೋ ಒಳಗೇ ಬರ್‍ತಿದಾರೆ........

(ರಾಜದೂತರ ಪ್ರವೇಶ)

ರಾಜದೂತ : ರಾಜರ ಸವಾರಿ ಚಿತ್ತೈಸಲಿದೆ........ಈ ದಿನ ರಾತ್ರಿ ಇಲ್ಲಿಗೆ ರಾಜರ ಸವಾರಿ ಚಿತ್ತೈಸಲಿದೆ.

ಮುಖಂಡ : ಆಂ, ಏನೆಂದೆ? ರಾಜರು?

ಅಮಲ : ರಾತ್ರಿ ಎಷ್ಟೊತ್ತಿಗೆ ಬರ್‍ತಾರೆ?

ರಾಜದೂತ : ರಾತ್ರಿ ಎರಡನೇ ಜಾವಕ್ಕೆ ರಾಜರ ಸವಾರಿ ಚಿತ್ತೈಸಲಿದೆ.

ಅಮಲ : ಪಹರೆಯಾವ ಢಾಣ್ ಢಾಣ್ ಅಂತ ಗಂಟೆ ಬಾರಿಸ್ತಾನಲ್ಲ, ಆಗ?

ರಾಜದೂತ : ಹೌದು. ರಾಜರು ತಮ್ಮ ಬಾಲಕ ಬಂಧುವನ್ನು ನೋಡಲಿಕ್ಕೋಸ್ಕರ ಈಗಾಗಲೇ ರಾಜವೈದ್ಯರನ್ನು ಕಳಿಸಿದ್ದಾರೆ........

(ಚಾಕರರ ಜತೆ ರಾಜವೈದ್ಯನ ಪ್ರವೇಶ)

ರಾಜವೈದ್ಯ : (ಪ್ರವೇಶಿಸುತ್ತ) ಇದೇನಿದು, ನಾಲ್ಕೂ ಕಡೆ ತೆರೆ ಕಟ್ಟಿ ಮುಚ್ಚಿಬಿಟ್ಟಿದೀರಿ........(ತನ್ನ ಚಾಕರರಿಗೆ) ಇವನ್ನೆಲ್ಲ ತೆಗೆದ್ಬಿಡಿ........ಎಲ್ಲಾ....... (ಅಮಲನಿಗೆ) ಮಗೂ, ಈಗ ಹೇಗಿದೆಯಪ್ಪಾ?

ಅಮಲ : ಈಗ ಸುಖವಾಗಿದೇನೆ. ನೋವೇ ಇಲ್ಲ........ದಣಿವೂ ಇಲ್ಲ. ಓ, ಎಲ್ಲ ತೆರೇನೂ ತೆಗೆದುಬಿಟ್ಟರು. ನಕ್ಷತ್ರ ಆಕಾಶ ಎಲ್ಲ ಕಾಣ್ತಾ ಇವೆ. ಕತ್ತಲಲ್ಲಿ ಇರೋ ನಕ್ಷತ್ರ ಕೂಡ ಕಾಣ್ತಿವೆ!

ರಾಜವೈದ್ಯ : ಅರ್ಧರಾತ್ರಿಗೆ ಅರಸರು ಬರ್‍ತಾರಲ್ಲ, ಆಗ ನೀನು ಅವರ ಹತ್ತಿರ ಎದ್ದು ಹೋಗ್ತೀಯಾ? ಆಗುತ್ತಾ?

ಅಮಲ : ಓ ಖಂಡಿತ! ಈಗ ಆಕಾಶ ನಕ್ಷತ್ರ ಎಲ್ಲ ಕಾಣ್ತಾ ಇವೆಯಲ್ಲ, ನನಗೆ ತುಂಬ ಸುಖವಾಗಿದೆ.

ರಾಜವೈದ್ಯ : (ಮಾಧವದತ್ತನಿಗೆ) ರಾಜರ ಆಗಮನ ಆಗೋ ಹೊತ್ತಿಗೆ ಮನೆಯನ್ನ ಹೂ ತೋರಣಗಳಿಂದ ಶೃಂಗಾರ ಮಾಡಬೇಕು. (ಮುಖಂಡನನ್ನು ತೋರಿಸಿ) ಇವನು ಇಲ್ಲಿ ಇರೋ ಅಗತ್ಯವಿಲ್ಲ.

ಅಮಲ : ಅವರೂ ಇರಲಿ, ಆಗದಾ? ನನಗೆ ರಾಜನ ಕಾಗದ ತಂದು ಕೊಟ್ಟೋರು, ನನ್ನ ಮೇಲೆ ತುಂಬ ಪ್ರೀತಿ ಅವರಿಗೆ.

ರಾಜವೈದ್ಯ : ಸರಿ, ಮಗು. ನಿನಗೆ ಬೇಕಾದರೆ ಇರಲಿ.

ಮಾಧವದತ್ತ : ಅರಸರ ಕರುಣೆ ದೊಡ್ಡದು ಮಗು. ನಿನ್ನ ಬಗ್ಗೆ ಅವರಿಗೆ ಅಷ್ಟು ಪ್ರೀತಿ ಅನ್ನೋದು ನನ್ನ ಭಾಗ್ಯ. ಮಗು, ಇನ್ನೇನು ಅವರೇ ಇಲ್ಲಿ ಬರ್ತಾರೆ, ನಿನಗೆ ಏನು ಬೇಕೋ ಅದನ್ನ ಕೇಳಿಕೋ ಅವರ ಹತ್ತಿರ.

ಅಮಲ : ಬಿಡ್ತೀನಾ ಮಾವ, ಕೇಳ್ತೀನೆ. ಆಗ್ಲೇ ಯೋಚನೆ ಮಾಡಿಟ್ಟುಕೊಂಡಿದೇನೆ.

ಮಾಧವದತ್ತ : ಏನು ಕೇಳ್ಕೋತಿಯೆ ಮಗು ?

ಅಮಲ : ನನ್ನನ್ನ ನಿಮ್ಮ ಅಂಚೆ ಮನುಷ್ಯನಾಗಿ ಮಾಡ್ಕೊಳ್ಳಿ ಅಂತ ಕೇಳ್ಕೋತೀನೆ !........ಮಾವ, ರಾಜರಿಗೆ ಊಟಕ್ಕೆ ಮಾಡಿಸ್ಬೇಕಲ್ಲ........

ಮಾಧವದತ್ತ : ಮಾಡೋಣ ಮಗು, ಅದು ನಮಗೊಂದು ಭಾಗ್ಯ.

ಮುಖಂಡ : ಅಯ್ಯೊ, ನಿನಗ್ಯಾಕೆ ತೊಂದರೆ ? ರಾಜರು ನಮ್ಮಲ್ಲಿಗೆ ಬರ್ತಾರೆ, ನಾನು ರಾಜಯೋಗ್ಯವಾಗಿ ಅವರಿಗೆ ಔತಣದ ಏರ್ಪಾಟು ಮಾಡ್ತೀನೆ. ಔತಣ ಮೆಚ್ಚಿ ರಾಜರು ಭಲೇ ಅನ್ನೋಹಾಗೆ ಮಾಡಿದರಾಯ್ತಲ್ಲ.

ರಾಜವೈದ್ಯ : ಬೇಡ. ರಾಜರು ಬೇರೆ ಎಲ್ಲಿಗೂ ಹೋಗೋದಿಲ್ಲ........(ಅಮಲ ಬಳಲಿ ಒರಗುವನು) ಹುಂ. ನೀವೆಲ್ಲ ಹೋಗಿ ಇನ್ನು. ಇಲ್ಲಿ ಯಾರೂ ಬೇಡ. ನಾನು ಇವನನ್ನ ನೋಡಿಕೋತೇನೆ........(ತಾತನಿಗೆ) ನಡೀರಿ ಮುದು ಕಪ್ಪ, ನೀವೇ ನಿಂತು ರಾಜರನ್ನ ಸ್ವಾಗತಿಸಿ ಕರಕೊಂಡು ಬರಬೇಕು. (ತಾತಯ್ಯ, ಮುಖಂಡ, ಮಾಧವದತ್ತ—ಎಲ್ಲರೂ ಹೋಗುವರು. ಅನಂತರ ಚಾಕರ ಕಡೆ ನೋಡಿ) ನೀವು ಇಲ್ಲಿ ದೀಪ ಆರಿಸಿ ಹೋಗಿ. ನಕ್ಷತ್ರದ ಬೆಳಕಲ್ಲದೆ ಬೇರೆ ಬೆಳಕು ಬೇಡ. (ಚಾಕರರು ದೀಪ ಆರಿಸಿ ಹೋಗುವರು.)

(ಕೆಲಹೊತ್ತಿನಲ್ಲಿ ಬೆಳದಿಂಗಳ ಬೆಳಕು ಹಬ್ಬಿಕೊಳ್ಳುತ್ತಿರುವಂತೆ, ಮಾವಿನಮರ ಪ್ರವೇಶಿಸುತ್ತದೆ.)

ಮಾವಿನಮರ : ಅಮಲ ! ಅಮಲ !........

ಅಮಲ : (ಮಲಗಿದ್ದಂತೆಯೇ) ಯಾರು ? —ನಂಗೆ ತುಂಬ ಸುಸ್ತು ಆಗಿಬಿಟ್ಟಿದೆ. ಏಳೋಕೇ ಆಗೋಲ್ಲ. ನೀನೇ ಇಲ್ಲಿಗೆ ಬರ್ತೀಯಾ ?

ಮಾವಿನಮರ : ಅಮಲ ಅಂತ್ಲೇ ಅಲ್ವಾ ನಿನ್ನ ಹೆಸರು ?........ನಾನು ಮಾವಿನಮರ ಅಮಲ. ಆ ಬೆಟ್ಟದ ಬುಡದಲ್ಲಿ ಹೊಳೆ ಹತ್ತಿರ ಇರೋದು ನಾನು

—ಗೊತ್ತಾ ?

ಅಮಲ : ಗೊತ್ತು ಗೊತ್ತು........

ಮಾವಿನಮರ : ನಿಂಗೆ ಮೈಯಲ್ಲಿ ಚೆನ್ನಾಗಿಲ್ಲ, ಬರೋಕೆ ಆಗೋಲ್ಲ ಅಂತ ನಾನೇ ನಿನ್ನ ಹತ್ತಿರ ಬಂದೆ.

ಅಮಲ : ಓ, ಎಷ್ಟು ಒಳ್ಳೇವನು ನೀನು! (ಹೇಗೋ ಸಾವರಿಸಿಕೊಂಡು ಎದ್ದು ಬರುವನು.)

ಮಾವಿನಮರ : ನಾನೇ ಬರ್‍ತಿದ್ದೆ ಅಲ್ಲಿ, ನೀ ಯಾಕೆ ಎದ್ದು ಬಂದೆ? ಛೆ, ಪಾಪ, ಎಷ್ಟು ಸುಸ್ತಾಗಿ ಹೋಗಿದ್ದೀಯೆ.

ಅಮಲ : ನಿನ್ನ ಮಾತು ಕೇಳಿದ ಮೇಲೆ ನನಗೆ ಮಲಗೋಕೇ ಆಗೋಲ್ಲ.

ಮಾವಿನಮರ : ಬೆಳಿಗ್ಗೆ ಮೈನಾ ಹಕ್ಕಿಗಳು ಬಂದು ಹೇಳಿದವ್ವು ಅಮಲ—ಹೀಗೇ, ಅಮಲ ಅಂತ, ಹುಡುಗ ಒಳ್ಳೆ ರಾಜಕುಮಾರನ ಹಾಗಿದಾನೆ, ಮೈಯಲ್ಲಿ ಚೆನ್ನಾಗಿಲ್ದೆ ಮಲಕ್ಕೊಂಡುಬಿಟ್ಟದಾನೆ—ಅಂತ. ಅದಕ್ಕೇ ನೋಡೋಕೆ ಬಂದೆ.

ಅಮಲ : ಮೈನಾ ಹಕ್ಕಿಗಳು ಹೇಳಿದ್ವಾ ?

ಮಾವಿನಮರ : ಹುಂ. ನನ್ನ ಮೈತುಂಬಾ ಎಷ್ಟು ಮೈನಾ ಹಕ್ಕಿಗಳಿವೆ ಗೊತ್ತಾ ?

ಅಮಲ : ಹೌದೇನು ?

ಮಾವಿನಮರ : ಹುಂ. ಮೈನಾ ಏನು, ನೂರಾರು ಥರ ಹಕ್ಕಿಗಳು ಇದಾವೆ. ಎಲ್ಲ ನನ್ನ ಮೈಮೇಲೆ ಕೂತ್ಕೊಂಡು ಆಡ್ತಿರ್‍ತಾವೆ. (ಕಿಚಿ ಕಿಚಿ ಸದ್ದು) ಥು, ನೋಡು —ಏನು ಕಿಚಿ ಕಿಚಿ ಅಂತ ಸದ್ದು ಮಾಡ್ತಾವೆ, ಮಾತು ಆಡೋಕೂ ಬಿಡೋಲ್ಲ........ರಾತ್ರಿ ಎಲ್ಲಾ ಹೀಗೇ ಅರಚ್ತಾ ಇರ್‍ತಾವೆ.

ಅಮಲ : ಎಷ್ಟು ಒಳ್ಳೇವು ಆ ಮೈನಾ ಹಕ್ಕಿಗಳು, ನನ್ನ ಸುದ್ದಿ ಬಂದು ಹೇಳಿದವಲ್ಲ ನಿಂಗೆ !

ಮಾವಿನಮರ : ಹೀಗೇ, ಎಲ್ಲಾ ಸುದ್ದೀನೂ ತಂದು ಹೇಳ್ತಾವೆ.

ಅಮಲ : ನಮ್ಗೇ ಬರೋಲ್ಲಪ್ಪಾ, ಈ ಹಕ್ಕಿಗಳ ಜೊತೆ ಸರೀ ಮಾತಾಡೋಕೆ. ಹೀಗೆ ಸುದ್ದಿ ಹೇಳೋರೇ ಇಲ್ಲ ನಮಗೆ. ಆದ್ರೆ ಈಗ, ನಮ್ಮ ರಾಜ ಇದಾನಲ್ಲ, ಅವನು, ಒಬ್ಬರ ಸುದ್ದಿ ಒಬ್ಬರಿಗೆ ಕೊಡೋಕೇ ಅಂತಲೇ ಅಂಚೆಮನೆ ತೆರೆದಿದಾನೆ.

ಮಾವಿನಮರ : ಅಂಚೆಮನೇನಾ ?

ಅಮಲ : ಹುಂ. ಅಲ್ಲಿ ತುಂಬಾ ಜನ ಅಂಚೆಮನುಷ್ಯರಿರ್‍ತಾರೆ. ಎದೆಗೆ ಚಿನ್ನದ ಬಿಲ್ಲೆ ಸಿಕ್ಕಿಸ್ಕೊಂಡು ಊರಿಂದ ಊರಿಗೆ ಮನೆಯಿಂದ ಮನೆಗೆ ಸುದ್ದಿ ಕಾಗದ ತಂದು ಹಂಚತಿರ್‍ತಾರೆ.

ಮಾವಿನಮರ : ನಿಂಗೂ ಕಾಗದ ತಂದ್ಕೊಡ್ತಾರಾ ?

ಅಮಲ : ಹುಂ. ನಂಗೂ ಕೊಡ್ತಾರೆ ಮತ್ತೆ.

ಮಾವಿನಮರ : ಹೀಗೆ ಊರಿಂದ ಊರಿಗೆ ಮನೆಯಿಂದ ಮನೆಗೆ ಕಾಗದ ಹಂಚೋದು ಎಷ್ಟು ಚೆನ್ನಾಗಿರುತ್ತೆ ಅಲ್ವಾ ?

ಅಮಲ : ಹೌದು, ಮತ್ತೆ. ನಾನು ಇನ್ನೇನು ಸ್ವಲ್ಪ ದೊಡ್ಡವನಾಗಿಬಿಟ್ರೆ ರಾಜನ ಅಂಚೆಮನುಷ್ಯ ಆಗಿಬಿಡ್ತೇನೆ........ಇನ್ನೇನು ಇವತ್ತು, ಈಗ ರಾಜನೇ ಬರ್‍ತಾನೆ ಇಲ್ಲಿಗೆ. ಅವನಿಗೆ ಹೇಳ್ತೇನೆ, ನನ್ನನ್ನ ದೊಡ್ಡೋನಾದ ಮೇಲೆ ಅಂಚೆಮನುಷ್ಯನ್ನ ಮಾಡ್ಕೊ ಅಂತ........

(ಹಿನ್ನೆಲೆಯಲ್ಲಿ ಹಾಡು. ನದಿ ಪ್ರವೇಶಿಸುತ್ತದೆ.)

ಅಮಲ : ಓ ಯಾರದು, ಅಲ್ಲಿ ಯಾರೋ ಉದ್ದಕ್ಕೆ ಬರ್‍ತಾ ಇದಾರಲ್ಲ ?

ಮಾವಿನಮರ : ಅದು ಹೊಳೆ, ಗೊತ್ತಿಲ್ವಾ ? ಯಾವಾಗ್ಲೂ ನನ್ನ ಕಾಲು ಬುಡದಲ್ಲೇ ಹರಕೊಂಡು ಹೋಗ್ತಿರುತ್ತೆ.

ಅಮಲ : ಹೊಳೆ ?

ಮಾವಿನಮರ : ಹುಂ.

(ಹಾಡಿನ ಹಿನ್ನೆಲೆಗೆ ಹೊಳೆ ಪ್ರವೇಶಿಸಿ ಕ್ರಮೇಣ ನಿಷ್ಕ್ರಮಿಸಲು–)

ಅಮಲ : ಓ ಹೊಳೆ, ಹೊಳೆ, ನಿಂತ್ಕೊಳ್ಳೋಲ್ವಾ ?

ಮಾವಿನಮರ : ಹೊಳೆ ನಿಲ್ಲೋದಿಲ್ಲಪ್ಪಾ, ಅದು ಹರೀತಾನೇ ಇರುತ್ತೆ. ಅದಕ್ಕೆ ಮಾತೂ ಬರೋಲ್ಲ.

ಅಮಲ : ಮಾತು ಯಾಕೆ ಅದಕ್ಕೆ ?—ಹಾಡು ಬರುತ್ತಲ್ಲ ! ಓ, ಹೋಗೇ ಬಿಡ್ತು........

ಮಾವಿನಮರ : ಬಾ ಅಮಲ, ನಾ ನಿನ್ನನ್ನ ಮೈ ಮೇಲೆ ಕೂರಿಸ್ಕೊಂಡು ಕರಕೊಂಡು ಹೋಗಿಬಿಡ್ತೇನೆ.

ಅಮಲ : ಹೌದು. ನಿನ್ನ ಜೊತೆ ಬಂದ್ರೆ ಎಷ್ಟು ಚೆನ್ನಾಗಿರುತ್ತೆ........ಆದ್ರೆ, ನಂಗೆ, ಈಗ ರಾಜ ಬರ್‍ತಾನಲ್ಲ........ನಾ ಬರೋಹಾಗಿಲ್ಲ. ಇಲ್ಲೇ ಇರ್‍ಬೇಕು. ನಡುರಾತ್ರಿಗೆ ಸರೀ ಬಂದುಬಿಡ್ತಾನೆ. ನೀ ಹೋಗು. ರಾಜ ಬಂದು ಹೋಗಲಿ, ನಾಳೆ ಬರ್‍ತೀನೆ.

ಮಾವಿನಮರ : ಆಯ್ತಪ್ಪ, ಹೋಗ್ತೀನೆ ನಾನು. (ಮರ ನಿಷ್ಕ್ರಮಿಸುವುದು.)

(ದೀಪ ಆರುವುದು. ಮತ್ತೆ ಹಿಂದಿನಂತೆ ಆಕಾಶ ನಕ್ಷತ್ರಗಳ ಮಂದ ಬೆಳಕು. ಸುಧಾ ಪ್ರವೇಶಿಸುತ್ತಾಳೆ.)

ಸುಧಾ : ಅಮಲ ! ಅಮಲ !

ರಾಜವೈದ್ಯ : ಅವನಿಗೆ ನಿದ್ದೆ ಬಂದಿದೆಯಮ್ಮ.

ಸುಧಾ : ನಾನು ಅವನಿಗೆ ಹೂ ತಂದಿದೇನಲ್ಲ. ಇದು ರಾತ್ರಿ ಅರಳೋ ಹೂವು. ಹಗಲು ಇರೋಲ್ಲ. ಅವನಿಗಾಗಿ ಕೊಯ್ದು ತಂದೆ.

ರಾಜವೈದ್ಯ : ಒಳ್ಳೇದು, ಇಲ್ಲಿ ಕೊಡು. ನಾನೇ ಕೊಡ್ತೀನೆ.

ಸುಧಾ : ಅವನು ಇನ್ನು ಏಳೋದು ಯಾವಾಗ ?

ರಾಜವೈದ್ಯ : ರಾಜರು ಬರ್‍ತಾರೆ, ಆಗ.

ಸುಧಾ : ಹಾಗಾದ್ರೆ ಅವನು ಎದ್ದಕೂಡಲೇ, ಅವನ ಕಿವೀಲಿ ಒಂದು ಮಾತು ಹೇಳ್ತೀರಾ ?

ರಾಜವೈದ್ಯ : ಏನು ಹೇಳ್ಬೇಕಮ್ಮ ?

ಸುಧಾ : ಸುಧಾ ಬಂದಿದ್ಲು ಅಂತ ಹೇಳ್ಬಿಡಿ.

ರಾಜವೈದ್ಯ : ಆಗಲಮ್ಮ.

ಸುಧಾ : ಒಂದ್ಸಲ ಹತ್ತಿರ ನಿಂತು ನೋಡಿ ಹೋಗ್ಲಾ ?

ರಾಜವೈದ್ಯ : ಬಾಮ್ಮಾ, ಬಾ. ನೋಡು, ಹಾಯಾಗಿ ನಿದ್ದೆ ಮಾಡ್ತಿದಾನೆ. ಮುಖದಲ್ಲಿ ನಗು ನೋಡು, ಕನಸು ಕಾಣ್ತಾ ಇದಾನೆ........

[ತಟಕ್ಕನೆ ಕತ್ತಲಾಗಿ ಕ್ಷಣದಲ್ಲಿ ಹೊಸ ಸ್ವಪ್ನಲೋಕದ ಬೆಳಕು ಹರಡುತ್ತದೆ. ಗಡಿಗೆಯಿಟ್ಟುಕೊಂಡ ನೀರಿನ ಹುಡುಗಿಯರ ಹಾಗೂ ನಕ್ಷತ್ರ ಕನ್ಯೆಯರ ನೃತ್ಯೋತ್ಸವ. ಅವರೆಲ್ಲ ನಿಷ್ಕ್ರಮಿಸಿದಾಗ ರಂಗ ಖಾಲಿಯಾಗಿದೆ, ಅಮಲನೂ ಅಲ್ಲಿಲ್ಲ. ಮಾಲೆಯ ಪಂಜರ ಬೆಳೆದು ಬೆಳೆದು ತೂಗುವಂತೆ ಕಂಡು ತಟಕ್ಕನೆ ಕಡಿದು ಬೀಳುತ್ತದೆ. ಸ್ಫೋಟದ ಶಬ್ದ—]

—ಮುಕ್ತಾಯ—

